# ಜಿ.ಎಸ್.ಶೆಣೈ

# SHENOY

ಪ್ರಧಾನ ಸಂಪಾದಕರು
ಪಿ.ಆರ್.ತಿಪ್ಪೇಸ್ವಾಮಿ

Editor - in - Chief
P.R.Thippeswamy

ಲೇಖಕ
ಡಾ। ಕಾಸರವಳ್ಳಿ ಜಿ.ರವೀಶ್

Author
**Dr. Kasaravalli G. Ravish**

ಕರ್ನಾಟಕ ಲಲಿತ ಕಲಾ ಅಕಾಡೆಮಿ
**KARNATAKA LALITHAKALA ACADEMY**

**G.S.SHENOY**
A monograph on the life and works of G.S.Shenoy

Authour: **Dr.Kasaravalli G.Ravish**
520, Banagirinagar, Bangalore 560 085.
Published by K.Mukundan, Registrar, Lalithakala Akademy,Nripathunga Road, Bangalore 560 002
Printed at Brindavan Printers, Banaglore 2
**Design, Typesetting and all photos by the Author**
First Edition 1995 1,000 copies

**Price Rs. 10=00**

**Author's Acknowledgments:**
Mrs. G.S.Shenoy, Gurudas, & Rekha
K.Mukundan, Registrar. KLKA,
P.R.Thippeswamy, President, KLKA
The editors of all periodicals who have published my writings, program executives of all AIR stations who have broadcast my talks on art.
Special thanks to U.Bhaskar Rao and K.G.Sathish

**ಜಿ. ಎಸ್. ಶೆಣೈ**
ಜಿ.ಎಸ್. ಶೆಣೈ ಅವರ ಜೀವನ ಹಾಗೂ ಕಲೆ ಕುರಿತ ಪುಸ್ತಕ
**ಲೇಖಕ : ಡಾ| ಕಾಸರವಳ್ಳಿ ಜಿ. ರವೀಶ್**
ಪ್ರಕಾಶಕರು : ಕೆ ಮುಕುಂದನ್, ರಿಜಿಸ್ಟ್ರಾರ್,
ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು ೨
ಮುದ್ರಕರು: ಬೃಂದಾವನ ಪ್ರಿಂಟರ್ಸ್, ಬೆಂಗಳೂರು
**ವಿನ್ಯಾಸ, ಛಾಯಾಚಿತ್ರ, ಟೈಪ್‌ಸೆಟ್ಟಿಂಗ್ ಹಾಗೂ**

ಪ್ರಥಮ ಮುದ್ರಣ ೧೯೯೫, ಪ್ರತಿಗಳು ೧,೦೦೦,
**ಬೆಲೆ ರೂ. ೧೦=೦೦**

# ಪ್ರಧಾನ ಸಂಪಾದಕರ ನುಡಿಗಳು

ಕರ್ನಾಟಕ ಲಲಿತ ಕಲಾ ಅಕಾಡೆಮಿಯ ಪ್ರಮುಖ ಯೋಜನೆಗಳಲ್ಲಿ ಪುಸ್ತಕ ಪ್ರಕಟಣೆಯೂ ಒಂದು. ಅಕಾಡೆಮಿಯು ಈವರೆಗೆ ಕಲೆ ಮತ್ತು ಕಲಾವಿದರ ಬಗೆಗೆ ಅನೇಕ ಪುಸ್ತಕಗಳನ್ನು ಹೊರತಂದಿದೆ. ಅನೇಕ ಹಿರಿಯ ಕಲಾವಿದರ ಬಗ್ಗೆ ಪುಸ್ತಕವನ್ನು ಹೊರತಂದ ಅಕಾಡೆಮಿಯು ಅದರೊಂದಿಗೆ ಸಮಕಾಲೀನ ಕಲಾವಿದರ ಬಗ್ಗೆಯೂ ಪುಸ್ತಕವನ್ನು ಹೊರತರುವ ಯೋಜನೆಯನ್ನು ಹಾಕಿಕೊಂಡಿದೆ. ಈ ಪುಸ್ತಕಗಳು ಹೆಸರಾಂತ ಕಲಾವಿದರ, ಅವರ ಕಲೆಯ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಕಲೆಯು ನಡೆದು ಬಂದ ದಾರಿ ಮತ್ತು ಕಲಾವಿದರ ಜೀವನ ಚರಿತ್ರೆಯ ಬಗ್ಗೆ ತಿಳುವಳಿಕೆ ಉಂಟು ಮಾಡಲು ಸಹಾಯ ಮಾಡಬಲ್ಲುದು.

ಸಮಕಾಲೀನ ಕಲಾವಿದರ ಮಾಲೆಯಲ್ಲಿ ಮೊದಲಿಗೆ ಈಗ ದಿ. ಜಿ. ಎಸ್.ಶೆಣೈ ಅವರ ಬಗೆಗಿನ ಪುಸ್ತಕ ಹೊರಬರುತ್ತಿದೆ.

ಶೆಣೈ ಅವರ ಬಗೆಗೆ ಈ ಕೃತಿ ಸಹಜವಾಗಿ ಮೂಡಿ ಬಂದಿದೆ. ಬರಹ ಚಿಕ್ಕದಾದರೂ ಚೊಕ್ಕವಾಗಿದೆ, ನೂತನವಾಗಿದೆ. ಶೆಣೈ ಅವರನ್ನು ಸಮೀಪದಿಂದ ಬಲ್ಲ ಲೇಖಕರು, ಶೆಣೈ ಅವರ ಜೀವನ ಚಿತ್ರವನ್ನು, ಕಲಾ ಸಾಧನೆಯನ್ನು ಮನ ಮುಟ್ಟುವಂತೆ ಬಣ್ಣಿಸಿದ್ದಾರೆ. ಮೈಸೂರಿನಲ್ಲಿ 'ಕಾವಾ' ಕಲಾಶಾಲೆಯಲ್ಲಿ ಅದನ್ನು ಎತ್ತರಕ್ಕೆ ತರುವ ನಿಟ್ಟಿನಲ್ಲಿ ಧೈರ್ಯವಹಿಸಿ ದುಡಿಯುತ್ತಿದ್ದ ಶೆಣೈ ಅವರ ಕೆಲಸವನ್ನು ಕಲಾವಿದರು ಮೆಚ್ಚಿ ಕೊಂಡಿದ್ದರು. ಅವರು ಇಷ್ಟು ಬೇಗ ನಮ್ಮಿಂದ ದೂರವಾಗುತ್ತಾರೆಂದು ನಾವು ಭಾವಿಸಿರಲಿಲ್ಲ. ಅವರ ಕಲಾ ಸಾಧನೆ ಕನ್ನಡ ಕಲಾಕ್ಷೇತ್ರಕ್ಕೆ ಚಿರಸ್ಮರಣೀಯ ಕೊಡುಗೆಯಾಗಿದೆ.

ಶೆಣೈ ಅವರ ಬಗ್ಗೆ ಒಂದೆರೆಡು ಹಳೆಯ ನೆನಪುಗಳನ್ನು ಇಲ್ಲಿ ದಾಖಲಿಸುವುದು ಉಚಿತ ಎಂದೆನಿಸುತ್ತದೆ. ೧೯೬೬ರಲ್ಲಿ ಶೆಣೈರವರು ಬೆಂಗಳೂರಿನಲ್ಲಿ ತಮ್ಮ ಪ್ರಥಮ ಕಲಾ ಪ್ರದರ್ಶನ ಏರ್ಪಡಿಸಿದ್ದ ಸಂಧರ್ಭ. ಗಾಂಧಿನಗರದ ಸಿಂಡಿಕೇಟ್ ಬ್ಯಾಂಕ್ ಸಭಾಂಗಣದಲ್ಲಿ ನಡೆದ ಪ್ರದರ್ಶನ. ಉದ್ಘಾಟನೆ ದಿ। ಅ.ನ.ಕೃ ಹಾಗೂ ದಿ। ಡಾ। ಟಿ. ಎಂ. ಎ. ಪೈ ಕಲಾವಿಮರ್ಶಕ ಜಿ. ವೆಂಕಟಾಚಲಂ ಮೊದಲಾದ ಗಣ್ಯರ ಸಮ್ಮುಖದಲ್ಲಿ ನಡೆದದ್ದು ಎಲ್ಲವೂ ನೆನಪಿಡುವಂತಹದು.

ಶೆಣೈ ಅವರು ಅಂದು ಪ್ರದರ್ಶಿಸಿದ್ದ ಚಿತ್ರಗಳಲ್ಲಿ ಹೆಚ್ಚಿನವು ನಿಸರ್ಗ ಚಿತ್ರಗಳೇ ಆಗಿದ್ದವು. ಬೆರಗುಗೊಳಿಸುವ ಆ ಚಿತ್ರಗಳ ಜೊತೆಗೆ ಸ್ತಬ್ಧ ಚಿತ್ರಗಳು ಹಾಗೂ ಒಂದೆರೆಡು ಭಾವಚಿತ್ರಗಳೂ ಇದ್ದವು.

ಶೆಣೈ ಅವರ ಚಿತ್ರಗಳಲ್ಲಿ ರೇಖೆ, ಬಣ್ಣಗಳಲ್ಲಿನ ಸಾಮರಸ್ಯತೆ, ಸ್ವಂತಿಕೆ, ಸಹಜತೆ ಹಾಗೂ ನೂತನ ಶೈಲಿ ಎದ್ದು ತೋರುತ್ತಿತ್ತು. ತೈಲ ಹಾಗೂ ಜಲವರ್ಣ ಎರಡೂ ಮಾಧ್ಯಮಗಳಲ್ಲೂ ಆವರ ಕುಂಚ ಪಳಗಿದೆ ಎಂಬುದನ್ನು ಮನಗಾಣಬಹುದಾಗಿತ್ತು.

ಕುಂಚದ ಸೆಳೆತ, ಹಿಡಿತ, ವಿಸ್ಮಯ ತರಿಸುವಂತಹವು. ಜೊತೆಗೇ ಅವರ ಚಿತ್ರಗಳು ಸ್ವತಂತ್ರ ಕಾವ್ಯದಂತೆ ಭಾವಾವೇಶ ತರಂಗಗಳಾಗಿರುತ್ತದೆ. ಪ್ರೋತ್ಸಾಹದ ಅಭಾವದ ಆ ದಿನಗಳಲ್ಲಿ ಶೆಣೈ ಅವಿಶ್ರಾಂತವಾಗಿ ಕಲಾ ಸಾಧನೆಯಲ್ಲಿ ತೊಡಗಿದ್ದುದು ನಮ್ಮ ಕಲಾವಿದರಿಗೆ ಸ್ಫೂರ್ತಿ ನೀಡುವಂತಿದ್ದವು.

ಮುಂದೆ ಶೆಣೈ ಅವರು ತಗಡು- ಶಿಲಾ ಚಿತ್ರಣದಲ್ಲಿ ನೂತನ ಶೈಲಿಗಳಲ್ಲಿ ಪ್ರಯೋಗ ನಡೆಸುತ್ತಾ ಸತತವಾಗಿ ನಾಡಿನ ಒಳಗೂ ಹೊರಗೂ ದೇಶ ವಿದೇಶಗಳಲ್ಲಿ ತಮ್ಮ ಕೃತಿಗಳನ್ನು ಪ್ರದರ್ಶಿಸುತ್ತಾ ಜನ ಮನವನ್ನು ಸೆಳೆಯುತ್ತಾ ಬಂದಿದ್ದರು. ತಾವು ಆಯ್ದು ಕೊಂಡ ಮಾಧ್ಯಮದಲ್ಲಿ ಪೂರ್ಣ ಪ್ರಭುತ್ವ ಗಳಿಸಿರುತ್ತಿದ್ದರು. ಹೊಸತನದ ಜೊತೆಗೆ ನಯಗಾರಿಕೆ, ಕೋಮಲತೆ ಇವರ ಚಿತ್ರಗಳಲ್ಲಿ ಮನಗಾಣಬಹುದಾಗಿದೆ.

ಈ ಮಾಲಿಕೆಯ ಪುಸ್ತಕಗಳನ್ನು ರಚಿಸಲು ಆರಿಸಿರುವ ಬರಹಗಾರರು ಕಲೆಯ ವಿಷಯ ಮತ್ತು ಆಯಾ ಕಲಾವಿದರ ಜೀವನದ ಬಗೆಗೆ ಅರಿತವರು. ಇವುಗಳಿಗೆ ಆರಿಸಿರುವ ಚಿತ್ರಗಳು ಆಯಾ ಕಲಾವಿದರ ಅವರ ಕಲಾ ವಿಲಾಸದ ಪ್ರತೀಕ. ಅವು ಆಯಾ ಕಲಾವಿದರ ಅವರ ಕಲಾ ಸಂಪತ್ತಿನ ವ್ಯಾಪ್ತಿಯನ್ನು ಅರಿಯಲು ಸಾರ್ಥಕವಾಗುವುದರಲ್ಲಿ ಸಂದೇಹವಿಲ್ಲ.

ಕಲಾವಿದರು, ಕಲಾರಸಿಕರು, ಮತ್ತು ಸಾಹಿತ್ಯಾಭಿಮಾನಿಗಳು ಅಕಾಡೆಮಿಯ ಈ ಸಾಧನೆಯನ್ನು ಸ್ವಾಗತಿಸುತ್ತಾರೆಂದು ಆಶಿಸುತ್ತೇನೆ.

ಬೆಂಗಳೂರು

ಪಿ. ಆರ್. ತಿಪ್ಪೇಸ್ವಾಮಿ
ಅಧ್ಯಕ್ಷರು
ಕರ್ನಾಟಕ ಲಲಿತ ಕಲಾ ಅಕಾಡೆಮಿ

# ಸು ಮಾರು ಎರಡು ದಶಕಗಳ ಹಿಂದೆ



1974 ನೇ ಇಸವಿ, ಡಿಸೆಂಬರ್ ತಿಂಗಳ ಒಂದು ಮುಂಜಾನೆ. ಮೈಸೂರಿನ ಮೆಡಿಕಲ್ ಕಾಲೇಜಿನ ಮುಂಭಾಗದಲ್ಲಿ ಬಾರೀ ಜನ ಸಂದಣಿ. ಏನಾಗಿರಬಹುದು. ಪೋಸ್ಟ್ ಮಾರ್ಟಂ ವಿಭಾಗ ಅಲ್ಲೇ ಇದೆ. ಯಾರಾದರೂ ಮುಖ್ಯ ವ್ಯಕ್ತಿಗೆ ದುರ್ದೆಸೆ ಒದಗಿರಬಹುದೆ? ಅಥವಾ ವೈದ್ಯಕೀಯ ವಿದ್ಯಾರ್ಥಿಗಳು ಮುಷ್ಕರ ಹೂಡಿರಬಹುದೇ? ಇರಲಿಕ್ಕಿಲ್ಲ ಬಿಡಿ. ಹಾಗಾದರೆ ಖಂಡಿತವಾಗಿಯೂ ಅಲ್ಲಿ ಒಂದು ಸಿನೆಮಾ ಷೂಟಿಂಗ್ ನಡೆಯುತ್ತಿದೆ.

ಯಾವುದೂ ಅಲ್ಲ ...

ಕಲಾವಿದನೊಬ್ಬ ಸ್ಥಳದಲ್ಲಿಯೇ ಚಿತ್ರ ರಚಿಸುವ ಕಾರ್ಯಕ್ರಮವಿಟ್ಟುಕೊಂಡಿದ್ದಾನೆ! ಅಷ್ಟೇನಾ? ಕೆಲವರು ಇಣುಕಿ ಹೋದರು. ಕೆಲವರು ಕುತೂಹಲದಿಂದ ಅಲ್ಲೇ ನಿಂತರು. ಇನ್ನು ಕೆಲವರು ತಮ್ಮ ವಂಶಾವಳಿಯಲ್ಲಿ ಯಾರ್‍ಯಾರು ಎಂತೆಂತಹ ಕಲಾವಿದರಾಗಿದ್ದರು ಎಂಬ ಚರಿತ್ರೆಯನ್ನು ಯಾರೂ ಕೇಳದಿದ್ದರೂ ಹೇಳುತ್ತಲಿದ್ದರು. ಕಲಾವಿದ ಸ್ಥಳದಲ್ಲಿ ಚಿತ್ರ ರಚಿಸಿ ತೋರಿಸಲು ಪಕ್ಕದಲ್ಲಿ ಕಲಾ ಶಾಲೆಯೇ ಇತ್ತು. ಆದರೆ ಮಾಡೋ ಕೆಲಸ ಬಿಟ್ಟು ಈ ಮರಿ ಡಾಕ್ಟರ್‌ಗಳು ತಮ್ಮ ಸಮಯ ಹೀಗೆ ವ್ಯಯ ಮಾಡಿದರೆ ಮುಂದೆ ಇವರು ಏನು ಮಾಡ್ತಾರೆ? ಎಂಬುದು ವಯಸ್ಕರೊಬ್ಬರ ಕಟು ನುಡಿ.

ಇವೆಲ್ಲದರ ನಡುವೆಯೂ ಕಲಾವಿದನ ಜಾದೂ ಕಾರ್ಯಕ್ರಮ ಆರಂಭವಾಯ್ತು. ಈಸೆಲ್ ಮೇಲೆ ಒಂದು ಪೂರ್ಣ ಪ್ರಮಾಣದ ಹ್ಯಾಂಡ್ ಮೇಡ್ ಕಾಗದದ ಹಾಳೆ. ಕೈಯಲ್ಲಿ ಒಂದು 2 ಅಂಗುಲ ಅಗಲದ ಬ್ರಷ್.

ಒಂದು ಕರ್ಚೀಫ್ ಕೊಡ್ತೀರಾ? ಕಲಾವಿದನ ಕೋರಿಕೆ. ಏಕೆ? ಪಾಪ, ಸಭಾ ಕಂಪನವೆಂದು ತೋರುತ್ತದೆ. ಅಲ್ಲ. ಆತ ಮಾಡುತ್ತಿರುವುದೇನು? ಕರವಸ್ತ್ರವನ್ನು ನೀರೊಳಗೆ ಅದ್ದಿದ ಕಲಾವಿದ ಆದರಿಂದ ಹಾಳೆಯನ್ನು ಒರೆಸುತ್ತಿದ್ದಾರೆ. ಇದ್ಯಾವ ಪರಿ, ಮಹರಾಯರೇ. ಜಲವರ್ಣ ಕೃತಿ ರಚಿಸ ಬೇಕೆಂದರೆ ಮೊದಲು ಕಾಗದವನ್ನು ಒದ್ದೆಯಾಗಿ ಸ್ಪೆಚ್ ಮಾಡಬೇಕು - ಪಕ್ಕದ ಕಲಾಶಾಲೆಯಲ್ಲಿ ಕಲಿಯುತ್ತಿದ್ದ ವಿದ್ಯಾರ್ಥಿಯೊಬ್ಬನ ಅಚ್ಚರಿಯ ನುಡಿ.

ಈಗ ನೋಡಿ. ಒದ್ದೆ ಕಾಗದದ ಮೇಲೆ ತಲೆ ಭಾಗದಲ್ಲಿ ಒಂದು ಹಳದಿ ಮಿಶ್ರಿತ ಹಸಿರು ಬಣ್ಣದ ಪಟ್ಟಿ ಎಳೆಯುತ್ತಿದ್ದಾರೆ. ವಾಹ್. ಪ್ರಾಯಶಃ ಜೋಗ ಜಲಪಾತದಲ್ಲಿಯೂ ಇಲ್ಲದ ರಭಸದಲ್ಲಿ ಆ ಬಣ್ಣ ಕೆಳಗಿಳಿಯಿತು, ಹರಿಯಿತು. ಮೇಲೆ ಮತ್ತೆರಡು ಬಣ್ಣದ ಪಟ್ಟಿಗಳು. ಚಾಕು ಹೊರತೆಗೆಯುತ್ತಿದ್ದಾರೆ ನೋಡಿ ನಮ್ಮ ಕಲಾವಿದ. ಹೆದರ ಬೇಡಿ, ಅದು ಚಿತ್ರ ಬರೆಯುವ ಚಾಕು. ಅದು ಸರಿ, ಅದನ್ನು ತೈಲವರ್ಣಗಳಿಗೆ ಉಪಯೋಗಿಸುತ್ತಾರೆಂದು ಕೇಳಿದ್ದೆ. ಇರಲಿ, ನೋಡೋಣ. ಅರೆ, ಅದನ್ನು ತೆಗೆದು ಕೊಂಡು ಹಾಳೆಯ ಮೇಲೆ ಕೆರೆಯುತ್ತಿದ್ದಾರೆ. ಹೌದಲ್ಲ. ಇದುವರೆಗೂ ಎಂತದ್ದೋ ಮಾಡರ್ನ್ ಆರ್ಟ್ ಅಂದು ಕೊಂಡಿದ್ದ ಹಾಳೆಯ ಮೇಲೆ ಗಿಡ, ಮರ, ಮೇಘಾಚ್ಛಾದಿತ ಆಕಾಶ, ಅಣು, ರೇಣು, ತೃಣ, ಕಾಷ್ಠಗಳೆಲ್ಲವೂ ಕಾಣಲು ಆರಂಭ.

ನೀವೀಗ ಪುಸ್ತಕ ಮುಚ್ಚಿ ಶೀರ್ಷಿಕೆ ಮತ್ತೊಮ್ಮೆ ನೋಡಿತ್ತೀರಿ. ಇಲ್ಲ - ನೀವು ಓದುತ್ತಿರುವುದು ಕಥೆ ಪುಸ್ತಕವಲ್ಲ! ಅಥವಾ ಆದರ ಶೀರ್ಷಿಕೆ ತಪ್ಪಾಗಿಯೂ ಇಲ್ಲ. ಈಗ ಕಲಾವಿದ ಒಂದು ಆರಡಿ ಹಿಂದೆ ಹೋಗಿ ಚಿತ್ರವನ್ನು ಗಂಭೀರವಾಗಿ ನೋಡಿ..

ಕೆಳಗೆ ಸಹಿ ಮಾಡುತ್ತಾರೆ......

SHENOY

**ಶೆಣೈ!** ಈ ಸಹಿ ಹೊಂದಿದ ಚಿತ್ರಗಳು ಆಮೇಲೆ ಯಾವ ಯಾವ ಅವತಾರಗಳನ್ನು ಹೊಂದುತ್ತಾ ಬಂದವು ಎಂದು ಬರೆಯಲು ಈ ಪುಸ್ತಕ ಸಾಲದು. ಆದರೂ ಅದರ ಸೂಕ್ಷ್ಮ ವಿಶ್ಲೇಷಣೆ ಮಾಡಲು ಪ್ರಯತ್ನಿಸುತ್ತೇನೆ.

ಮೇಲೆ ಹೇಳಿದ ಚಿತ್ರ ರಚನಾ ಕ್ರಮವೇ ಅವರು ಅನೂಚಾನು ಕಲೆಯಿಂದ ಹೊರಬಂದು ಹೊಸತರ ಅನ್ವೇಷಣೆಯಲ್ಲಿ ತೊಡಗಿದ್ದಾರೆ ಎಂಬುದನ್ನು ಪ್ರತ್ಯಕ್ಷ ರೂಪಿಸುತ್ತದೆ. ಅದರೆ ಹಾಗೆಂದು ಶೆಣೈ ಕುಂಚ

ಹಿಡಿದೊಡನೆ ಮಾಡರ್ನ್ ಆರ್ಟ್ ಎಂದು ಗೀಚಿದವರಲ್ಲ. ಅವರು ಅತ್ಯಂತ ಪ್ರತಿಭಾವಂತ ಅಕಾಡೆಮಿಕ್ ಕಲಾಕಾರರಾಗಿಯೇ ತಮ್ಮ ಕಲಾ ಜೀವನವನ್ನು ಆರಂಭಿಸಿದ್ದವರು. ಆದರೆ ಚಿತ್ರಕಾರರ ಸಂತತಿಯವರೂ ಅವರಲ್ಲ. ಕಾಫೀ ಪುಡಿಯ ದೊಡ್ಡ ವ್ಯಾಪಾರಸ್ಥರ ಶ್ರೀಮಂತ ಕುಟುಂಬ ಅವರದು. ನೋಟು ಎಣಿಸುವ ಕೈ ಕುಂಚ ಹಿಡಿದದ್ದು ಹೇಗೆ ಮತ್ತು ಏಕೆ? ಕೊನೆಯಲ್ಲಿ ಅವರು ಎರಡೂ ಮಾಡುತ್ತಿದ್ದರು! ಕೇವಲ ಕುಂಚ ಹಿಡಿದು ಚಿತ್ರ ರಚಿಸುವುದರಲ್ಲಷ್ಟೇ ಅಲ್ಲ, ಅವರ ಸಮಕಾಲೀನರಲ್ಲಿ ಅವರಷ್ಟು ಸಲೀಸಾಗಿ ಚಿತ್ರಗಳನ್ನು ಮಾರಾಟ ಮಾಡುವವರೂ ಅತಿ ವಿರಳ. ಬಿಸಿ ದೋಸೆಗಳಂತೆ ಅವರ ಚಿತ್ರಗಳು ರಚಿಸುತ್ತಿದ್ದಂತೆಯೇ ಮಾರಾಟವಾಗುತ್ತಿದ್ದವು.

ಆದರೆ ಈ ಹೂವು ಚೆಲ್ಲಿದ ಹಾದಿಯಲ್ಲಿ ನಡೆಯುತ್ತಿರುವ ಅವರ ಈ ಸ್ಥಿತಿಯ ಮುನ್ನ ಅವರು ದಾಟಿದ ಕಲ್ಲು ಮುಳ್ಳಿನ ಹಾದಿಗಳೆಷ್ಟು? -ಬೀದಿಯಲ್ಲಿ ನಿಂತು ಚಿತ್ರ ಮಾರುವುದರಿಂದ ಸಿಂಗಪೂರಿನ ಅತ್ಯಂತ ಮಹತ್ವ ಪೂರ್ಣ ಗ್ಯಾಲರಿಯಲ್ಲಿ ಪ್ರದರ್ಶಿಸುವವರೆಗೆ, ಅದೆಷ್ಟು ವೈವಿಧ್ಯ ಪೂರ್ಣ!




1938ರಲ್ಲಿ ಸದಾನಂದ ಶ್ಯಾನುಭಾಗ ಹಾಗೂ ಶಾಂತಾಬಾಯಿಯವರ ಮಗನಾಗಿ ಜನಿಸಿದವರು- ಗೋಕುಲದಾಸ್ ಶೆಣ್ಯೆ ಅಥವಾ ನಮ್ಮ ಜಿ. ಎಸ್.ಶೆಣ್ಯೆ.

ಮನೆಯೆದುರು ಸ್ವಲ್ಪ ಖಾಲಿ ಜಾಗ. ಎಳ್ಳು ಭಂಢಾರಿ ಗದ್ದೆ ಎಂದು ಆಗ ಕರೆಯುತ್ತಿದ್ದರು. ಅಲ್ಲಿ ಪ್ರತಿನಿತ್ಯ ಕೋಲ, ಪಂಜುರ್ಳಿ, ಯಕ್ಷಗಾನ ಬಣ್ಣದ ವೇಷಗಳನ್ನು ಕಟ್ಟುವ ತಾಲೀಮು ನಡೆಸುವ ಪದ್ಧತಿ ಇತ್ತು. ಬಾಲಕ ಶೆಣ್ಯೆ ಅದರ ವೀಕ್ಷಣೆಯಲ್ಲಿ ತಲ್ಲೀನ. ತಾನೂ ಅದರಂತೆ ವೇಷ ಕಟ್ಟುವುದು, ಅದರ ಚಿತ್ರ ರಚಿಸುವುದು ಇದರಲ್ಲಿಯೇ ಅವರ ದಿನ ಕಳೆಯಿತು. ಈ ದಿನಗಳಲ್ಲಿ ಅವರ ಅಜ್ಜ - ಅಂದರೆ ತಾಯಿಯ ತಂದೆ- ಅವರಿಗೆ ಸ್ವಲ್ಪ ಬೆನ್ನು ತಟ್ಟುತ್ತಿದ್ದರು. ಅವರು ಹೀಗೆಯೇ ಹವ್ಯಾಸಕ್ಕೆಂದು ಗಣಪತಿ ವಿಗ್ರಹಗಳನ್ನು ಮಾಡುವ ಅಭ್ಯಾಸವುಳ್ಳವರು. ಮೇಲಾಗಿ ಆಗಿನ ಕಾಲದ ಪವಾಡಪುರುಷನೆನಿಸಿ ಕೊಂಡಿದ್ದ ರಾಜಾರವಿವರ್ಮನನ್ನು ನೋಡಿದವರಾಗಿದ್ದರು. ಹಾಗಾಗಿ ಅವರಿಗೆ ಮೊಮ್ಮಗನ ಈ ಬಣ್ಣದಾಟಗಳು ಮೋಹಕವಾಗಿಯೇ ಕಂಡವು. ಉತ್ತೇಜಿಸಿದರು. ಶೆಣ್ಯೆರ ಬಣ್ಣದ ಹುಚ್ಚು ಮೊಳಕೆಯೊಡೆದು ಜೋರಾಗಿಯೇ ಚಿಗುರಿ ಬಲಿಯತೊಡಗಿತು.

ಪರಿಣಾಮ S.S.L.C.ಯಲ್ಲಿ ಪಂಗನಾಮ! ಅದು ಕರ್ನಾಟಕ ಕಲೆಗೆ ಒಂದು ಸಂತೋಷದ ಸಂಗತಿಯೇ ಎನ್ನೋಣ. ಏಕೆಂದರೆ ಅವರ ವಿದ್ಯಾಭ್ಯಾಸ ಸಾಂಗವಾಗಿ ನೆರವೇರಿ ಅವರು ಯಾವುದೇ ವರಿಷ್ಠ ಅಧಿಕಾರಿಯಾಗಿದ್ದರೂ ನಮ್ಮ ಕಲಾ ಕ್ಷೇತ್ರಕ್ಕಂತೂ ಒಬ್ಬ ಕಲಾವಿದ ದೊರೆಯುತ್ತಿರಲಿಲ್ಲ.

ಇರಲಿ, ಹಾಗಿರುವಾಗ ಅವರ ಅಜ್ಜನಿಂದಲೇ ಸಲಹೆ ಬಂದಿತು. ಎಸ್ಸೆಸ್ಸೆಲ್ಸಿ ಮುಗಿಸಿ ಮೈಸೂರಿನ ಚಾಮಾರಾಜೇಂದ್ರ ತಾಂತ್ರಿಕ ಶಾಲೆಯ ವಿದ್ಯಾರ್ಥಿಯಾಗು ಎಂದು. ಶೆಣ್ಯೆಗೆ ಖುಷಿ. ಆದರೆ ಮನೆಯವರು ಒಪ್ಪಿಯಾರೇ? ವಾದ ವಿವಾದ, ಜಗಳ, ಹಠ, ಅಳು ಅದರ ಮಧ್ಯೆ ತಾನು ಬಯಸಿದುದನ್ನು ಸಾಧಿಸಲೇ ಬೇಕೆಂಬ ಛಲ, ಇವುಗಳೆಲ್ಲದರ ಫಲ ಮನೆಯಲ್ಲಿ ಅರ್ಧಮನಸ್ಸಿನ ಒಪ್ಪಿಗೆಯಂತೂ ದೊರೆಯಿತು.

ಶೆಣ್ಯೆ 1958ರಲ್ಲಿ ಮೈಸೂರಿನ ಚಾಮರಾಜೇಂದ್ರ ತಾಂತ್ರಿಕ ಶಾಲೆಯನ್ನು ಸೇರಿದರು. ಅಲ್ಲಿ ಒಂದು ವರ್ಷ ಕಠಿಣ ಪರಿಶ್ರಮ. ಪ್ರಾತಃಕಾಲ 7 ಗಂಟೆಗೆ ಶಾಲೆ ಸೇರುವುದರೊಡನೆ ದಿನಚರಿಯ ಆರಂಭ.

ಅಲ್ಲಿ ಪಠ್ಯಕ್ಕೆ ಸಂಭಂಧಿಸಿದಂತೆ ಅಭ್ಯಾಸ, ತಾಲೀಮು. ವಿರಾಮದ ವೇಳೆಯಲ್ಲಿ ಬಸ್‌ಸ್ಟಾಂಡ್‌ನಲ್ಲಿ ಸ್ಥಳದಲ್ಲಿಯೇ ಮನುಷ್ಯಾಕೃತಿಗಳ ಕರಡು ಚಿತ್ರ ರಚನೆ. ಚಾಮುಂಡಿ ತಪ್ಪಲಿನಲ್ಲಿ ನಿಸರ್ಗ ಚಿತ್ರಗಳ ರಚನೆ. ಒಟ್ಟಾರೆ ದಿನಚರಿಯೆಂದರೆ ಚಿತ್ರ ರಚನೆ, ಚಿತ್ರ ರಚನೆಯೆಂದರೆ ದಿನಚರಿ, ಹೀಗಿತ್ತು ಅವರ ಜೀವನ. ಒಂದು ವರ್ಷದ ಅವಧಿಯಲ್ಲಿ ಅವರ ಪ್ರತಿಭೆ, ಸಾಧನೆಗಳನ್ನು ಕೂಲಂಕುಷವಾಗಿ ಗಮನಿಸುತ್ತಿದ್ದ ಸೂಫಿ ಮಾಸ್ತರರು ಈ ಹುಡುಗನ ಕಲೆ ಕಲಿಯುವಿಕೆಯ ತೃಷೆಗೆ ತಮ್ಮ ಶಾಲೆ ಸೂಕ್ತವಲ್ಲವೆಂದೇ ಭಾವಿಸಿದರು. ಸೂಫಿ ಆಗಿನ ಕಾಲದ ಪ್ರಮುಖ ಚಿತ್ರಕಾರರು, ಅದಕ್ಕಿಂತ ಹೆಚ್ಚು ಬಹುಮಾನ್ಯ ಕಲಾ ಭೋಧಕರಾಗಿದ್ದರು. ಅವರ ವನ್ಯಜೀವಿಗಳ ಅಧ್ಯಯನದ ಚಿತ್ರಗಳು ಕರ್ನಾಟಕ ಕಲಾ ಇತಿಹಾಸದಲ್ಲೊಂದು ಮೈಲಿಗಲ್ಲಾಗಿವೆ.

ಅವರು ಶೆಣೈರನ್ನು ಕರೆದು ತಮ್ಮ ಅನಿಸಿಕೆಯನ್ನು ಬಯಲು ಮಾಡಿದರು. ಹಾಗಾದರೆ ಮುಂದೇನು? ಶೆಣೈ ಢೋಲಾಯಮಾನ ಸ್ಥಿತಿಯಲ್ಲಿ. ಸೂಫಿಯವರೇ ಒಂದು ಪರಿಹಾರ ಸೂಚಿಸಿದರು. ಇಲ್ಲಿದ್ದರೆ ನಿನ್ನ ಸಮಯ ಹಾಳು. ನೀನು ಸೀದಾ ಮುಂಬಯಿಗೆ ಹೋಗಿ ಸರ್ ಜೆ.ಜೆ. ಸ್ಕೂಲ್ ಆಫ್ ಆರ್ಟ್ ಅನ್ನು ಸೇರು ಎಂಬುದು ಅವರ ಉಪದೇಶ.

ಮೈಸೂರಿಗೇ ಕಳಿಸಲು ಒಲ್ಲದ ಮನೆಯವರು ಮುಂಬಯಿಗೆ ಕಳಿಸಿಯಾರೆ? ಮತ್ತೆ ಮನೆಯಲ್ಲೊಂದು ಮಿನಿ ಕುರುಕ್ಷೇತ್ರ. ಹಾಂ ,ಹೂಂ ಎನ್ನುವಷ್ಟರಲ್ಲಿ ಈ ಗಲಾಟೆಯಲ್ಲಿಯೇ ಮೂರು ತಿಂಗಳು ಕಳೆದಾಯ್ತು. ಇನ್ನು ಅಲ್ಲಿ ಸೇರಲು ತಡವಾಗುತ್ತದೆ. ಆದರೆ ಸೇರಲೇ ಬೇಕು. ಒಂದೇ ಉಪಾಯ- ಮನೆ ಬಿಟ್ಟು ಓಡಿ ಹೋಗುವುದು. ಈ ಮಧ್ಯೆ ಶೆಣೈರ ತಾಯಿ, ಅಜ್ಜ ಮಧ್ಯಸ್ಥಿಕೆ ವಹಿಸಿ ಅಪ್ಪನ ಬಾಯಲ್ಲಿ ಆಗಲಿ ಎನ್ನಿಸುವಷ್ಟರಲ್ಲಿ ಕ್ಯಾಲೆಂಡರಿನ ಪುಟಗಳು ಆಗಸ್ಟ್ ತಿಂಗಳನ್ನು ತೋರಿಸುತ್ತಿದ್ದವು. ಅದು ಶಾಲೆ ಸೇರಲು ಅಕಾಲ. ಆದರೆ ಶೆಣೈಯವರಿಗೆ ಅದರ ಪೂರ್ಣ ಅರಿವೂ ಇರಲಿಲ್ಲ. ಹೊರಟರು ಗಂಟು ಮೂಟೆ ಕಟ್ಟಿ ಮುಂಬಯಿಗೆ.

ಜೆ.ಜೆ. ಕಲಾಶಾಲೆ ತಲುಪಿ ಅಲ್ಲಿನ ಪೇಂಟಿಂಗ್ ವಿಭಾಗದ ಮುಖ್ಯಸ್ಥ ಶಿರಗಾಂವಕರ್‌ರನ್ನು ಕಂಡರು. ಕಂಡು ಕೇಳರಿಯದ ಊರಿನಿಂದ ಬಂದ ಈ ಹುಡುಗನ ಚಿತ್ರ ರಚನಾ ವೈಖರಿ ಕಂಡು ಸಂತೋಷ, ಅಚ್ಚರಿ. ಆದರೆ ಈ ಅಕಾಲದಲ್ಲಿ ಪ್ರವೇಶ ಕೇಳುತ್ತಿರುವುದರ ಬಗೆಗೆ ನಗು. ಆದರೆ ತಾವು ಏನೂ ಮಾಡಲಾಗದ ಬಗೆಗೆ ಮರುಕ. ಈ ಎಲ್ಲಾ ಭಾವನೆಗಳನ್ನು ಒಟ್ಟು ಹಾಕಿಕೊಂಡು ತಮ್ಮ ಅಸಹಾಯಕತೆಯನ್ನು ತಿಳಿಸಿದರು. ಅಂತೆಯೇ ಒಂದು

ಒಳ್ಳೆಯ ಆಹ್ವಾನವನ್ನೂ ನೀಡಿದರು. ಅದೆಂದರೆ ಖಾಸಗಿಯಾಗಿ ಕುಳಿತು ಮೊದಲನೇ ವರ್ಷವನ್ನು ಕಟ್ಟಿ, ಮೊದಲ ದರ್ಜೆಯಲ್ಲಿ ಉತ್ತೀರ್ಣನಾದರೆ ಮುಂದಿನ ವರ್ಷದ ಪ್ರವೇಶದ ಜವಾಬುದಾರಿ ತಮ್ಮದು ಎಂದು.

ಇನ್ನು ಉಡುಪಿಯೇ ಗತಿ ಎಂದು ಅಂದು ಕೊಂಡು ಪಕ್ಕದ ಕ್ಯಾಂಟೀನಿನಲ್ಲಿ ಕಾಫೀ ಹೀರುತ್ತಿದ್ದವರಿಗೆ ತುಳು ಮಾತುಗಳು ಕೇಳಬೇಕೆ? -ಅದೂ ಕಲಾಶಾಲೆಯ ಅವರಣದಲ್ಲಿಯೇ! ಒಂದಿಬ್ಬರು ದಕ್ಷಿಣ ಕನ್ನಡದ ವಿದ್ಯಾರ್ಥಿಗಳ ಜೊತೆ ಇಂದಿನ ಖ್ಯಾತ ಚಿತ್ರಕಾರರಾದ ಕೆ. ಎಸ್. ರಾವ್ ಅಲ್ಲಿದ್ದರು. ಜೊತೆಯಲ್ಲಿ ಗೋಪಾಲ್ ಪದ್ಮಶಾಲಿಯವರು. ಅವರ ಪರಿಚಯ ಮಾಡಿಕೊಂಡು ಇದುವರೆಗೆ ನಡೆದುದನ್ನೆಲ್ಲಾ ಹೇಳಿದರು. ಆಗ ಅವರೆಲ್ಲರಿಗೂ ಹೊಳೆದದ್ದು ...

ಪ್ರೊ. ಜಿ. ಎಸ್. ದಂಡಾವತಿಮಠ.

ಧಾರವಾಡ ಮೂಲದ ದಂಡಾವತಿ ಮಠರವರು ನಡೆಸುತ್ತಿದ್ದ ನೂತನ ಕಲಾಮಂದಿರ ಒಂದು ರೀತಿಯಲ್ಲಿ ಹೊಸಕಲೆಯ ಹರಿಕಾರರಿಗೆ ಹಾದಿ ತೋರಿಸುವ ಆಶ್ರಮವಾಗಿತ್ತು. ಅಲ್ಲೇಕೆ ಸೇರಬಾರದೆಂಬ ಸಲಹೆ.

ಅದೇನು ವ್ಯರ್ಥ ಸಲಹೆಯಲ್ಲ ಬಿಡಿ. ಇವರ ಕಲೆಗೆ ಎಲ್ಲಾ ಪ್ರೋತ್ಸಾಹ ನೀಡುವ ಜೊತೆಗೆ, ಅವರು ಶಾಲೆ ಮುಚ್ಚುವಾಗ 'ಶೆಣೈ, ನೀನು ಬೇಕಾದಷ್ಟು ಹೊತ್ತು ಅಭ್ಯಾಸ ಮಾಡು' ಎಂದು ಶಾಲೆಯ ಕೀಲಿ ಕೈಯನ್ನು ಶೆಣೈರವರ ಕೈಗೆ ಕೊಟ್ಟು ಹೋಗುತ್ತಿದ್ದರಂತೆ.

ಪರಿಣಾಮ: ಆ ವರ್ಷದ ಪರೀಕ್ಷೆಯಲ್ಲಿ ನಾಲ್ಕ್ಕೆ ಪ್ರಥಮ ದರ್ಜೆಗಳು ಬಂದಿದ್ದು, ಅದರಲ್ಲಿ ಮೂರು ಜೆ.ಜೆ ಗೆ ಹೋಗಿದ್ದರೆ, ಒಂದು ಮಾತ್ರಾ ಬೇರೆ ಶಾಲೆಗೆ ಹೋಗಿತ್ತು. ಅದು ಶೆಣೈರಿಗೆ ಎಂದು ಹೇಳಬೇಕಿಲ್ಲ ತಾನೆ?

ಮತ್ತೆ ಜೆ.ಜೆ.ಗೆ. ಶಿರಗಾಂವ್‌ಕರರು ಮರು ಮಾತಿಲ್ಲದೇ ನೇರ ಮೂರನೇ ವರ್ಷಕ್ಕೆ ಸೇರಿಸಿ ಕೊಂಡರು. ಅರೆ, ಮೊದಲ ವರ್ಷದ ನಂತರ ಎರಡನೇ ವರ್ಷವಲ್ಲವೇ? ಆದರೆ ಅದು ಶೆಣೈರಂತಹ ಪ್ರತಿಭಾವಂತ ವಿದ್ಯಾರ್ಥಿಗೆ ಅನಾವಶ್ಯ ಎಂದು ಶಿರಗಾಂವಕರ್‌ರು ತೀರ್ಮಾನಿಸಿದ್ದರು!

ಅದಿವ್ರೇಕರ್, ವಾಮನ್ ಚಿಂಚೋಲಿಕರ್‌ರಂತಹ ಇಂದಿನ ಉದ್ದಾಮ ಕಲಾವಿದರು ಅಲ್ಲಿ ಅವರ ಸಹಪಾಠಿಗಳು. ಬಾಬೂ ರಾವ್ ಸಾತ್‌ವಾಲೇಕರ್, ಎಸ್. ಬಿ. ಪಲ್ಸೀಕರ್ ರಂತಹ ಅಧ್ಯಾಪಕರು ಅಲ್ಲಿ ಅವರಿಗೆ ಲಭ್ಯವಾದರು. ಇನ್ನು ದಂಡಾವತಿಮಠರನ್ನಂತೂ ಮರೆಯುವಂತಿಲ್ಲ ಎನ್ನುತ್ತಾರೆ ಶೆಣೈ. ಪೀಟರ್ ಲೂಯಿಸ್ ಅವರಿಗಿಂತ ಮುಂದಿನ

ತರಗತಿಯಲ್ಲಿದ್ದರೆ, ಸಿಂಧೂರರು ಕೆಳಗಿನ ತರಗತಿಯಲ್ಲಿದ್ದರು. ಖಂಡೇರಾವ್ ಅವರ ಸಹಪಾಠಿಗಳಾಗಿದ್ದರು.

ಅಲ್ಲಿ ವಿದ್ಯಾರ್ಥಿಗಳಿಗೆ ಒಂದು ಬಗೆಯ ನಿಯಮ ಹಾಕಿದ್ದರು. ಅವರು ಅಲ್ಲಿ ನಡೆಯುವ ಎಲ್ಲಾ ಪ್ರದರ್ಶನಗಳಿಗೂ ಭೇಟಿ ನೀಡಿ ಅವುಗಳ ವಿಮರ್ಶೆಯನ್ನು, ಅದರ ಬಗೆಗೆ ವಿಚಾರ ವಿನಿಮಯವನ್ನು ಮಾಡಬೇಕಿತ್ತು. ಆದರಿಂದಾಗಿ ಅವರ ವಿಮರ್ಶಾ ಬುಧ್ಧಿ ಜಾಗೃತವಾಗುತ್ತಿತ್ತು. ಅಲ್ಲದೇ ಮುಂಬಯಿಯ ಪರಿಸರದಲ್ಲಿ ಹೊಸ ಮಾದರಿ ಚಿತ್ರಕಲೆಯ ತಾಜಾ ಸಮಕ್ಷಮ ಸಾಧ್ಯವಾಗುತ್ತಿತ್ತು.

ಪ್ರಥಮ ದರ್ಜೆಯಲ್ಲಿಯೇ ತಮ್ಮ ಡಿಪ್ಲೋಮಾವನ್ನು ಪೂರೈಸಿಕೊಂಡು ವಾಪಾಸ್ ಉಡುಪಿಗೆ ಬಂದರು. ಮನುಷ್ಯನಿಗೆ ಹೊಟ್ಟೆ, ಬಟ್ಟೆ , ಒಂದು ಸೂರು ಇದ್ದಾಗ ಆತ ಬೇರೆ ವಿಷಯಗಳ ಚಿಂತನೆ ಮಾಡಲು ಶಕ್ತನಾಗುತ್ತಾನೆ. ಇದು ಶೆಣೈರವರ ವಾದ. ಇದು ಸ್ವಲ್ಪ ಮಟ್ಟಿಗೆ ಸತ್ಯವೂ ಹೌದು. ಆದರೆ ಮನಶಾಸ್ತ್ರಜ್ಞರು ಸುಪ್ತ ಚೈತನ್ಯದ ಪ್ರೇರಣೆ ಆತನ ಮೂಲಭೂತ ಆವಶ್ಯಕತೆಗಳನ್ನು ಮೀರಿ ಸೃಜನಾತ್ಮಕತೆಯತ್ತ ಚಿಂತನೆ ಮಾಡುವಂತೆ ಪ್ರಚೋದಿಸುತ್ತದೆ ಎನ್ನುತ್ತಾರೆ. ಹೇಗಾದರೂ ಸರಿ, ಮನೆ ಬಿಟ್ಟು ಓಡಿಹೋಗಿಯಾದರೂ ಕಲಾವಿದನಾಗುತ್ತೇನೆ ಎಂದು ಶೆಣೈ ತೀರ್ಮಾನ ಮಾಡಿದ್ದರು ಎಂದು ಹೇಳಿದ್ದೆನಲ್ಲವೇ? ಅದು ಮೇಲಿನ ವಾದಕ್ಕೆ ಉದಾಹರಣೆ. ಇರಲಿ.

ಶೆಣೈರವರ ವಿಚಾರಧಾರೆಯಂತೆ ಅವರು ಜೀವನೋಪಾಯಕ್ಕಾಗಿ ಏನಾದರೂ ಮಾಡಬೇಕಿತ್ತು. ತಾನು ಸ್ವತಂತ್ರವಾಗಿರಬೇಕೆಂಬ ಆಸೆ ಅವರಿಗಿತ್ತು. ಮುಂಬಯಿಯಲ್ಲಿ ನೆಲಸಿ ಪೂರ್ಣ ವೇಳೆಯ ಕಲಾವಿದನಾಗುವ ಕನಸು ಕಂಡಿದ್ದರು ಶೆಣೈ.

ಅಷ್ಟರಲ್ಲಿ ಈ ಹುಡುಗನ ಹುಚ್ಚಿಗೆ ಮದುವೆಯೇ ಮದ್ದು ಎಂಬ ತೀರ್ಮಾನಕ್ಕೆ ಬಂದ ಮನೆಯವರು ಅವರಿಗೆ ಮದುವೆ ಮಾಡಿದರು. ಅಂದರೆ ಸ್ವಲ್ಪ ಜವಾಬ್ದಾರಿ ತಲೆ ಮೇಲೆ ಬಿದ್ದರೆ, ಅವರೂ ತಮ್ಮ ಮನೆ ಸಂಸಾರ ಎಂದು ಓಡಾಡುತ್ತಾ ಕಲೆಯ ಹುಚ್ಚಿನಿಂದ ತಪ್ಪಿಸಿ ಕೊಳ್ಳುತ್ತಾರೆಂಬ ಆಸೆ ಮನೆಯವರಿಗಿತ್ತು. ಹಾಗಾಗಿ 1964ರಲ್ಲಿ ಗೃಹಸ್ಥರಾದರು ಶೆಣೈ. ಈ ಎಲ್ಲದರ ಪರಿಣಾಮ ಶೆಣೈ ಉಡುಪಿಯಲ್ಲಿಯೇ ಉಳಿದರು - ಪತ್ನಿ ಸುಮತಿಯೊಡನೆ. ಈ ಸುಂದರ ಸಂಸಾರದ ಫಲವಾಗಿ ಗುರುದಾಸ ಹಾಗೂ ರೇಖಾಳ ಆಗಮನ.

**ಶೃಂಗಾರ್ ಕಲಾಗಾರ:**

ಕಲಾವಿದನಾಗಿ ಹೆಸರು ಮಾಡಲು ಮುಂಬಯಿಯೇ ಆಗಬೇಕೇನು? ಕಾರಂತರು ಪುತ್ತೂರಿನ ಮೂಲೆಯಲ್ಲಿ ಕುಳಿತು ಏನೆಲ್ಲಾ ಸಾಧಿಸಿದರು. ಹಾಗೆಯೇ ತಾವೂ ಉಡುಪಿಯಲ್ಲಿಯೇ ಕುಳಿತು ಮುಂಬಯಿಯ ಕಲಾವಿದರೂ ತಿರುಗಿ ಹನೋಡುವಂತೆ ಮಾಡಬೇಕು ಎಂದು ತೀರ್ಮಾನಿಸಿದರು. ಹಾಗಾಗಿ, 1964ರಲ್ಲಿ ಉದರಂಭರಣೆಗಾಗಿ ಶೃಂಗಾರ್ ಸ್ಟುಡಿಯೋವನ್ನು ಉಡುಪಿಯಲ್ಲಿ ಆರಂಭಿಸಿದರು. ಅದು ಚಿತ್ರಕಾರನ ಸ್ಟುಡಿಯೋವಲ್ಲ. ಏಕೆಂದರೆ ಅವರು ಉಡುಪಿಗೆ ಹಿಂತಿರುಗಿದ ದಿನಗಳಲ್ಲಿ ಚಿತ್ರಗಳನ್ನು ಕೊಳ್ಳುವುದು ಹಾಗಿರಲಿ, ಚಿತ್ರ ಪ್ರದರ್ಶನ ನೋಡಲು ಜನಗಳಿಗೆ ದಕ್ಷಿಣೆ ಕೊಟ್ಟು ತರಬೇಕಾದ ಪರಿಸ್ಥಿತಿ ಇತ್ತು. ಹಾಗಾಗಿ ಅವರಿಗೆ ತಿಳಿದ್ದಿದ್ದ ಇನ್ನೊಂದು ಕಲೆ ಛಾಯಾಗ್ರಹಣವನ್ನು ಇಲ್ಲಿ ಬಳಸಿದರು. ಅದರ ಒಂದು ಭಾಗವೇ ಶೃಂಗಾರ್ ಆರ್ಟ್ ಗ್ಯಾಲರಿಯಾಯ್ತು. ಅಲ್ಲಿ ತಮ್ಮ ಚಿತ್ರಗಳನ್ನು ಪ್ರದರ್ಶಿಸಿದರು. ನಂತರ ತಮ್ಮ ಶಿಷ್ಯರದ್ದು, ಗೆಳೆಯರದ್ದು. ನಂತರ ರಾಷ್ಟ್ರದ ವಿವಿದ ಭಾಗಗಳಿಂದ ಕಲಾವಿದರನ್ನು ಕರೆಸಿ ಪ್ರದರ್ಶನ ಏರ್ಪಡಿಸಿದರು. ಲಲಿತ ಕಲಾ ಅಕಾಡೆಮಿ ಬೆಂಗಳೂರನ್ನು ಬಿಟ್ಟು ಹೊರಬಂದು ಶೃಂಗಾರ್‌ನಲ್ಲಿ ಅದರ ವಾರ್ಷಿಕ ಕಲಾ ಪ್ರದರ್ಶನ ನಡೆಸಿತು.

**ಸಂಘಟಕರಾಗಿ ಶೆಣೈ:**

ಈಗ ಉಡುಪಿಯ ಸುತ್ತ ಮುತ್ತ ಇರುವ ಕಲಾವಿದರು, ಮರಿಕಲಾವಿದರುಗಳನ್ನು ಹುಡುಕುವ ಕೆಲಸ ಆರಂಭ. ಶೆಣೈ ಬಹಳ ಒಳ್ಳೆಯ ಸಂಘಟಕರೂ ಸಹಾ. ಹೀಗೆ ಅಲ್ಲಲ್ಲಿ ಹೆಕ್ಕಿ ಹಲವಾರು ಕಲಾವಿದರುಗಳನ್ನು ಗುಂಪು ಮಾಡಿ Progressive Painters of costal Mysore ಎಂಬ ಗುಂಪು ಆರಂಭಿಸಿದರು. ನಂತರ South Kanara Art Council - SKAC ಎಂಬ ಇನ್ನೊಂದು ತಂಡ ಕಟ್ಟಿದರು. ಕೆಲವೆರಡು ವರ್ಷಗಳ ನಂತರ ರಾಜಧಾನಿಯಲ್ಲಿ ಅದರ ಪ್ರತಿಧ್ವನಿ ಮೊಳಗ ಬೇಕೆಂಬ ಯೋಚನೆಯಿಂದ ಬೆಂಗಳೂರಿನಲ್ಲಿ Mysore Art Council- MAC ಎಂಬ ಇನ್ನೊಂದು ತಂಡ ದೊಡನೆ ಸೇರಿದರು. ಬೆಂಗಳೂರಿನಲ್ಲಿ ನೆಲೆಸಿದ ಇತರ ಕಲಾವಿದರಾದ ಕಿಯೋಟೆ, ಜಾಸು ರಾವಲ್, ಮುನೋಳಿ, ಪೀಟರ್ ಲೂಯಿಸ್, ಭಾಸ್ಕರ್ ರಾವ್ ಮುಂತಾದವರು ಇದರಲ್ಲಿದ್ದರು.

ಈ ಎಲ್ಲಾ ಸಂಸ್ಥೆಗಳೂ ಹಲವಾರು ಪ್ರದರ್ಶನಗಳನ್ನು ನಡೆಸಿದವು. ಹೊಸ ಅಭಿರುಚಿಯನ್ನು ಜನತೆಯಲ್ಲಿ ಬೆಳಸುವುದರಲ್ಲಿ ಸಹಾಯಕವಾದವು. ಜೊತೆಗೇ ಹೊಸ ಕಲಾವಿದರನ್ನು ಪ್ರೇರೇಪಿಸಿದವು ಸಹಾ.

**ಪ್ರತಿಭಟಕರಾಗಿ:**

ಕಲೆಯನ್ನು ಜನಸಾಮಾನ್ಯರಿಗೆ ತಲುಪಿಸುವಲ್ಲಿ ಈ ಬಗೆಯ ಸಂಘಟನೆಗಳನ್ನು ಮಾಡಿದ ಶೆಣೈರಿಗೆ ನಮ್ಮಲ್ಲಿ ಕಲೆಯತ್ತ ಸರ್ಕಾರ ತೋರಿಸುವ ದಿವ್ಯ ನಿರ್ಲಕ್ಷದತ್ತ ಮನಸ್ಸು ವ್ಯಗ್ರವಾಗಿತ್ತು. ಹಾಗಾಗಿ ಇದಕ್ಕೆ ಪ್ರತಿಭಟನೆ ಮಾಡುವ ಉದ್ದೇಶದಿಂದ, ಹಾಗೂ ಸಾಮಾನ್ಯರಿಗೆ ಮತ್ತು ಸರ್ಕಾರಕ್ಕೆ ಏಕ ಕಾಲಕ್ಕೆ ಇದರ ಅರಿವು ಮೂಡಿಸುವುದರ ಸಲುವಾಗಿ 1970 ಹಾಗೂ 1971ರಲ್ಲಿ ಬೆಂಗಳೂರಿನ ಬೈಬಲ್ ಸೊಸೈಟಿಯ ಕಾಲು ಹಾದಿಯಲ್ಲಿ ತಮ್ಮ ಮಿತ್ರರೊಡಗೂಡಿ ಪ್ರದರ್ಶನ ನಡೆಸಿದರು. ಪತ್ರಿಕೆಗಳಲ್ಲಿ ಇದರ ಬಗೆಗೆ ಧಿಢೀರ್ ವರದಿ ಬಂದಾಗ ಸರ್ಕಾರಕ್ಕೂ ದಿಗ್ಭ್ರಮೆ.

ಅಕಾಡೆಮಿಯ ಸದಸ್ಯರಾಗಿ ಕೆಲಸ ಮಾಡುತ್ತಿದ್ದಾಗ ತಮಗೆ ಸರಿ ತೋರದ್ದನ್ನು ತಟ್ಟನೆ ಪ್ರತಿಭಟಿಸುತ್ತಿದ್ದರು. ಹೀಗೊಮ್ಮೆ ಇವರ ಈ ಪ್ರತಿಭಟನೆಗೆ ಆಗಿನ ಅಧ್ಯಕ್ಷರು -'ನೀವು ಇಲ್ಲಿ ಗಲಾಟೆ ಮಾಡಲೆಂದೇ ಬರುತ್ತೀರೋ ಹೇಗೆ' ಎಂದದ್ದೂ ಉಂಟು. ಅವರಿಗೆ ನಮ್ಮಲ್ಲಿನ ರಾಜಕೀಯದ ಪರಿಚಯ ಇರಲಿಲ್ಲ. ಹಾಗಾಗಿ ಅವರು ಶೆಣೈರವರ ಪ್ರತಿಭಟನೆಗಳನ್ನು ಹೀಗೆ ಪ್ರಶ್ನಿಸಿದ್ದು ಸಹಜವೇ ಆಗಿತ್ತು.

**ಬೆಂಗಳೂರಿನಲ್ಲಿ ಶೆಣೈ:**

ಹಲವಾರು ವರ್ಷಗಳ ಉಡುಪಿ ವಾಸದ ನಂತರ ಬೆಂಗಳೂರಿಗೆ ಬಂದು ನೆಲೆಸುವ ಯೋಚನೆ ಮಾಡಿದರು. ಕಲಾವಿದರಿಗೆ ರಾಜಾಶ್ರಯವಂತೂ ಈಗಿಲ್ಲ. ಕನಿಷ್ಠ ರಾಜಧಾನಿ ಆಶ್ರಯವಾದರೂ ಇರಬೇಕು! ಹಾಗಾಗಿ ಗಂಟು ಮೂಟೆ ಕಟ್ಟಿಕೊಂಡು 1984ರಲ್ಲಿ ಬೆಂಗಳೂರಿಗೆ ವಲಸೆ ಬಂದರು. ಭಿತ್ತಿಚಿತ್ರ ರಚನೆಗೆ ಹೆಚ್ಚು ಅವಕಾಶ ಇಲ್ಲಿ ದೊರೆಯಿತು.

**ಅಧ್ಯಾಪಕರಾಗಿ ಶೆಣೈ:**

1993ರ ಆಗಸ್ಟ್‌ನಲ್ಲಿ ಸರ್ಕಾರ ಅವರನ್ನು ಚಾಮರಾಜಾ ದೃಶ್ಯಕಲಾ ಅಕಾಡೆಮಿಯ ಡೀನ್ ಆಗಿ ನೇಮಿಸಿತು. 'ಕಾವಾ' ಎಂಬ ಕಿರು ನಾಮಧೇಯದ ಈ ಅಕಾಡೆಮಿ, ಶೆಣೈ ಕಲಿತ ಚಾಮರಾಜೇಂದ್ರ ಕಲಾಶಾಲೆಯ ಹೊಸ ಹಾಗೂ ಪರಿಷ್ಕೃತ ರೂಪವಾಗಿತ್ತು. ಹಾಗಾಗಿ ಶೆಣೈರಿಗೆ ಖುಷಿಯಾಗಿತ್ತು. ಅದನ್ನು ರಾಷ್ಟ್ರ ಮಟ್ಟದ ಕಲಾಶಾಲೆಯನ್ನಾಗಿ

ಪರಿವರ್ತಿಸಲು ಅವರು ಎಲ್ಲಾ ಪ್ರಯತ್ನ ನಡೆಸಿದ್ದರು. ಅದಕ್ಕಾಗಿ ಚಾಮುಂಡಿಯ ತಪ್ಪಲಲ್ಲಿ ಜಾಗ ಕೇಳಿದ್ದರು. ಕಲಾ ವಿದ್ಯಾರ್ಥಿಗಳಿಗೆ ಎಲ್ಲಾ ಸೋದರ ಕಲೆಗಳ ಪರಿಚಯ ಇರಬೇಕು ಎಂಬುದು ಅವರ ವಾದವಾಗಿತ್ತು.

**ಅಂತಿಮ ತೆರೆ.**

ಲಲಿತ ಕಲಾ ಅಕಾಡೆಮಿ ಈ ಪುಸ್ತಕ ಬರೆಯಲು ಕೇಳಿದಾಗ, ಹಳೆಯ ಚಂದಮಾಮ ಕಥೆಗಳಲ್ಲಿನಂತೆ 'ನಂತರ ಅವರು ಸುಖವಾಗಿ ಬಾಳಿದರು' ಎಂದು ಇಲ್ಲಿಗೆ ಮುಕ್ತಾಯ ಹಾಡೋಣ ಎಂದು ತೀರ್ಮಾನಿಸಿದ್ದೆ. ಆದರೆ ಏನೇನೋ ನಡೆದು ಹೋಯಿತು.

ಕೆಲ ಸಮಯದ ಹಿಂದೆ ಅಕಾಡೆವಿ ೬ಈ ಪುಸ್ತಕ ಬರೆಯಲು ಆಹ್ವಾನಿಸಿತು. ಶೆಣೈರ ಬಗೆಗೆ ಸಾಕಷ್ಟು ಬಾರಿ ಬರೆದಿದ್ದರೂ, ಎಲ್ಲಾ ವಿಷಯಗಳ ಬಗೆಗೆ ಅವರೊಡನೆ ಚರ್ಚಿಸಿದ್ದರೂ, ಪುಸ್ತಕದ ಕೆಲಸದ ಮುನ್ನ ನಾನು ಅವರನ್ನು ಭೆಟ್ಟಿಯಾಗುವುದು ಅವಶ್ಯ ಎನ್ನಿಸಿತು. ಆದರೆ ನಾವಿಬ್ಬರು ಭೆಟ್ಟಿಯಾಗೋಣವೆಂದು ತೀರ್ಮಾನಿಸಿದಾಗೆಲ್ಲಾ ಏನಾದರೂ ಅಡಚಣೆ ಇದ್ದೇ ಇರುತ್ತಿತ್ತು. ಕೊನೆಗೊಮ್ಮೆ ಅಕ್ಟೋಬರ್ 16 ರಂದು ದೆಹಲಿಯ ಹಾದಿಯಲ್ಲಿ ಬೆಂಗಳೂರಿನಲ್ಲಿ ನಿಲ್ಲಬೇಕಾದಾಗ ನನಗೆ ಫೋನಾಯಿಸಿದರು. ತಮ್ಮ ಗೆಲವು, ಸೋಲು, ಎಲ್ಲದರ ಬಗೆಗೆ ಮಾತನಾಡಿದರು. ತಾವು ವಿದ್ಯಾರ್ಥಿಯಾಗಿದ್ದಾಗ ರಚಿಸಿದ ಚಿತ್ರಗಳನ್ನು ನನಗೆ ತೋರಿಸುವುದಾಗಿ ತಿಳಿಸಿದರು.

ಅಲ್ಲಿಂದ ಅವರು ದೆಹಲಿಗೆ ತೆರಳಿದಾಗ, ಅಲ್ಲಿ ಲಘು ಹೃದಯಾಘಾತವಾದ ವಿಷಯ ತಿಳಿಯಿತು. ಬೆಂಗಳೂರಿಗೆ ಬಂದ ಮೇಲೆ ಅವರು ಹಲವಾರು ವೈದ್ಯಕೀಯ ಪರೀಕ್ಷೆಗೊಳಗಾಗಬೇಕಾಯ್ತು. ಹಾಗಾಗಿ ನವೆಂಬರ್ ಹದಿನಾರರಂದು ಕಾಣಲು ತಿಳಿಸಿದರು. ಆದರೆ ಕಾರಣಾಂತರದಿಂದ ಅದು ಸಾಧ್ಯವಾಗಲಿಲ್ಲ.

ನವೆಂಬರ್ 17, 1994

ಬೆಳಗಿನ ಜಾವ. ಫೋನ್ ಸದ್ದು ಮಾಡಿತು. ಈ ಅರೆ ರಾತ್ರಿಯಲ್ಲಿ ಯಾವನೋ ತರಲೆ ರೋಗಿಯೇ ಸರಿ ಎಂದು ಕೊಂಡೆ. ಆ ಕಡೆಯಿಂದ ಭಾರವಾದ ದನಿ ಕೇಳಿಸಿತು. 'ಶೆಣೈರವರು....'

ಮುಂದೆ ಹೇಳುವುದು ಕಷ್ಟ. ಆದರೆ ಅರ್ಥ ಮಾತ್ರಾ ಸ್ಪಷ್ಟ.

**ಶೆಣೈ ಈಗ ಕೇವಲ ಇತಿಹಾಸ**




ಶೆಣೈ ಪ್ರತಿ ಮಾಧ್ಯಮವನ್ನೂ ಅದಕ್ಕೆ ಸೂಕ್ತ ಗೌರವದೊಂದಿಗೆ ದುಡಿಸಿಕೊಳ್ಳುತ್ತಿದ್ದರು. ಆ ಮಾಧ್ಯಮಗಳ ಒಳ ಹೊರಗುಗಳನ್ನು ಚೆನ್ನಾಗಿ ಅರಿತುಕೊಳ್ಳುತ್ತಿದ್ದರು. ಹಾಗಾಗಿ ಅವರು ಮಾಧ್ಯಮ ಬದಲಿಸಿದಾಗ ಹಿಂದಿನ ಮಾಧ್ಯಮದಲ್ಲಿ ಸೋತರೆಂದು ತೀರ್ಮಾನಿಸಲು ಸಾಧ್ಯವಾಗುತ್ತಿರಲಿಲ್ಲ ಅಥವಾ ಆ ಮಾಧ್ಯಮಕ್ಕೆ ತಿಲಾಂಜಲಿ ಇತ್ತರೆಂದೂ ಅರ್ಥವಲ್ಲ. ಇದೇ ಮಾತು ಅವರ ವಿಭಿನ್ನ ಶೈಲಿಗಳಿಗೂ ಅನ್ವಯಿಸುತ್ತದೆ. ಕೆಲವೊಮ್ಮೆ ಹಲವಾರು ವರ್ಷಗಳ ನಂತರ ಅವರು ಮತ್ತೆ ಅದೇ ಶೈಲಿ ಅಥವಾ ಮಾಧ್ಯಮಕ್ಕೆ ವಾಪಾಸಾಗುತ್ತಿದ್ದುದ್ದುಂಟು. ಇತ್ತೀಚೆಗೆ ಅವರು ನಡೆಸಿದ ವಿವಿಧ ಶೈಲಿಯ ಗಣೇಶ ಆಕೃತಿಗಳ ಪ್ರದರ್ಶನದಿಂದ ಇದು ಸಾಬೀತಾಗುತ್ತದೆ. ಈ ಪ್ರದರ್ಶನದಲ್ಲಿ ಅವರು ತಮ್ಮ ಹೆಚ್ಚಿನ ಶೈಲಿ ಹಾಗೂ ಮಾಧ್ಯಮಗಳಲ್ಲಿ ಗಣೇಶಾಕೃತಿಯನ್ನು ರಚಿಸಿದ್ದರು. ಅದು ಅವರ ಜಲವರ್ಣದ ಒದ್ದೆ ಮೇಲೆ ಒದ್ದೆ - wet on wet -ತಂತ್ರದಿಂದ ಇತ್ತೀಚಿನ ಕಾಡು ಬಂಡೆಗಳ (wild rocks) ಮಾಲಿಕೆಯಲ್ಲಿನವರೆಗೆ ಹಲವಾರು ವೈವಿಧ್ಯ ಪೂರ್ಣ ಚಿತ್ರಗಳನ್ನು ಒಳಗೊಂಡಿತ್ತು. ಒಂದು ರೀತಿಯಲ್ಲಿ ಅವರ ಚಿತ್ರಗಳ ಪುನರಾವಲೋಕನವೆಂಬಂತೆ ಇತ್ತು. ಇದಾದ ನಂತರ ಬೇರೆ ಪ್ರದರ್ಶನಕ್ಕೆ ಮುನ್ನ ಶೆಣೈ ನಮ್ಮನ್ನಗಲಿದರು ಎಂಬುದನ್ನು ಗಮನಿಸಿದಾಗ ಈ ಪ್ರದರ್ಶನ ಹಲವಾರು ಕಾರಣಗಳಿಂದಾಗಿ ಅತಿ ಮುಖ್ಯ ಪ್ರದರ್ಶನವಾಗುತ್ತದೆ.

**ಸಮಕಾಲೀನರೊಡನೆ ತುಲನೆ:**

ಕಾಲಾನುಕ್ರಮಣಿಕೆಯಲ್ಲಿ ನಾವು ಚರ್ಚಿಸುವುದಾದರೆ ನಾವು ಅವರ ಅಕಾಡೆಮಿಕ್ ಹಸ್ತದ ಬಗೆಗೆ ಒಂದು ಮಾತು ಹೇಳಬೇಕು ಮತ್ತು ಅಲ್ಲಿಂದಲೇ ಚರ್ಚೆ ಆರಂಭಿಸಬೇಕು. ಕಲಾಶಾಲೆಯಿಂದ ಹೊರಬಿದ್ದ ತಕ್ಷಣದ ದಿನಗಳಲ್ಲಿ ಅವರು ಅತ್ಯುತ್ತಮ ಅಕಾಡೆಮಿಕ್ ಚಿತ್ರಗಳನ್ನು ರಚಿಸುತ್ತಿದ್ದರು. ಅಂದರೆ ಯಾವತ್ತೂ ವಿದ್ಯಾರ್ಥಿಗಳಂತೆ ನಿಸರ್ಗ, ಭಾವಚಿತ್ರ, ಸ್ತಬ್ಧಚಿತ್ರಣಗಳನ್ನೇ (Still Life) ಮಾಡುತ್ತಿದ್ದರು. ಆದರೆ ಅವರ ಒಲವು ನಿಸರ್ಗದತ್ತ ಇತ್ತು. ಈ ನಿಸರ್ಗದ ಬಗೆಗಿನ ಒಲವನ್ನು ಅವರ ಚಿತ್ರಕಲೆಯ ಎಲ್ಲಾ ಹಂತದಲ್ಲೂ ಕಾಣುತ್ತೇವೆ. ಈ ಕಾಲದ ನಿಸರ್ಗ ಚಿತ್ರಗಳು ಹೆಚ್ಚಾಗಿ ಜಲ ವರ್ಣದಲ್ಲಿಯೇ ಇರುತ್ತಿದ್ದವು. ಅದರಲ್ಲೂ ಒದ್ದೆ ತಂತ್ರ ಅವರಿಗೆ ಪ್ರಿಯವಾಗಿತ್ತು. ಆದರೆ ಇವು ಪ್ರಕೃತಿಯ ಪ್ರತಿಕೃತಿಯಾಗದೇ ಒಂದು ಬಗೆಯ ಕ್ಯಾರಿಕೇಚರ್ ನಂತೆ ಕಾಣುತ್ತಿದ್ದುದೂ ಅಪರೂಪವಲ್ಲ.

ಹಳೆಯ ತಲೆಮಾರಿನ ಒದ್ದೆ ತಂತ್ರದ ಕಲಾವಿದರಿಗಿಂತ (ಉದಾ ಎಂ. ಎಸ್. ಜೋಷಿ) ಭಿನ್ನವಾದ, ಒಂದು ಬಗೆಯ ಶೈಲೀಕೃತ ಧೋರಣೆ, ಈ ಚಿತ್ರಗಳ ಜೀವಾಳವಾಗಿತ್ತು. ಪ್ರಾಯಶಃ ಆಗಿನ ಅವರ ಸಮಕಾಲೀನರಲ್ಲಿ ಪುಣಿಚಿತ್ತಾಯ ಅವರೊಬ್ಬರು ಈ ಬಗೆಯ ಚಿತ್ರೀಕರಣದಲ್ಲಿ ಆಸಕ್ತಿ ವಹಿಸಿದ್ದರಷ್ಟೇ. ತಂತ್ರಗಳು ಒಂದೇ ಇದ್ದರೂ ವರ್ಣಧೋರಣೆಯಲ್ಲಿ ಆಜಗಜಾಂತರವಿದ್ದಿತ್ತು.

ಒದ್ದೆ ತಂತ್ರ, ಕಲಾವಿದನಿಗೆ ಒಂದು ಸವಾಲಿನಂತೆ.. ನೀರಿನಿಂದ ಒದ್ದೆ ಮಾಡಿದ ಕಾಗದದ ಮೇಲೆ ಬಣ್ಣ ಚೆಲ್ಲಿದಾಗ ಅವು ಎಲ್ಲೆಂದರಲ್ಲಿ ಓಡಾಡತೊಡಗುತ್ತಾವೆ - ಬೆಂಗಳೂರಿನ ಮೆಜೆಸ್ಟಿಕ್‌ನಲ್ಲಿ ರಿಕ್ಷಾಗಳು ನುಗ್ಗಾಡುವಂತೆ. ಅದನ್ನು ತಹಬಂದಿಗೆ ತರುವ ಹಂತದಲ್ಲಿ ಕಲಾವಿದ ಸಾಕಷ್ಟು ಕಸರತ್ತು ಮಾಡಬೇಕಾಗುತ್ತದೆ. ಇದಕ್ಕೆ ಸಾಕಷ್ಟು ಪರಿಶ್ರಮ ಹಾಗೂ ತಾಲೀಮು ಬೇಕಾಗುತ್ತದೆ. ಅಲ್ಲದೇ ಈ ಹಂತದಲ್ಲಿ ಅಷ್ಟಾಗಿ ನೈಜವಲ್ಲದ ಬಣ್ಣಗಳನ್ನು ಉಪಯೋಗಿಸುವ ಮೂಲಕ ಚಿತ್ರಗಳನ್ನು ವಿಭಿನ್ನವಾಗಿ ಕಾಣುವಂತೆ ಮಾಡುತಿದ್ದರು. ಉದಾಹರಣೆಗೆ ಹಳದಿ ಬಣ್ಣದ ಆಕಾಶ. ಇದು ಅಸಜವಾಗಬಹುದೆನ್ನಿಸಿದರೂ ಕರಾವಳಿಯ ರೋಷತಪ್ತ ಬಾನಿನ ನೈಜ ಚಿತ್ರಣವೆಂಬ ಭ್ರಮೆ ಹುಟ್ಟಿಸುತ್ತದೆ. ಪ್ರಕೃತಿಯ ಭಾವನೆಯನ್ನು ಸ್ಥಿರೀಕರಿಸುವ ಪ್ರಯತ್ನ ಇದಾಗಿದೆ. ಸ್ವಭಾವತಃ ಹೆಚ್ಚು ಮಳೆಬೀಳುವ ಅವರ ಪರಿಸರ, ಬಾರಕೂರಿನ ಅವಶೇಷಗಳು, ಸೇಂಟ್ ಮೇರಿಯ ದ್ವೀಪದ ಬಂಡೆಗಳು ಇವರ ಯಾವತ್ತೂ ವಿಷಯಗಳಲ್ಲಿ ಕೆಲವಾಗಿದ್ದವು..

ಆದರೆ ಭಾವಚಿತ್ರಣ ಇನ್ನೊಂದು ಬಗೆಯ ವೈಶಿಷ್ಟ್ಯ ಪಡೆದಿರುತ್ತಿದ್ದವು. ಕೇವಲ ವ್ಯಕ್ತಿಯ ಹೋಲಿಕೆಗಷ್ಟೇ ಸೀಮಿತವಾಗದ ಅವರ ಭಾವಚಿತ್ರಗಳು ಭಾವನೆಗಳನ್ನು ಹೊರಹೊಮ್ಮಿಸುತ್ತಿದ್ದವು. ಕೆಲವೊಮ್ಮೆ ಅವು ಕ್ಯಾಡಿಡ್ ಛಾಯಾಚಿತ್ರಕಾರನ್ನು ನಾಚಿಸುವಂತಿರುತ್ತಿದ್ದವು. ಉದಾಹರಣೆಗೆ ಹೊಸ ಪ್ರಾಕಿನಲ್ಲಿ ನಲಿಯುತ್ತಿರುವ ಹುಡುಗಿಯ ಚಿತ್ರ, ಪ್ರೊ. ದಂಡಾವತಿ ಮಠರ ಭಾವಚಿತ್ರಗಳನ್ನು ಹೇಳಬಹುದು. ಇವು ತೈಲವರ್ಣ ದಲ್ಲಿರುತ್ತಿದ್ದವು. ಅವರ ಸಮಕಾಲೀನರಾದ ಪೀಟರ್ ಲೂಯಿಸ್‌ರ ಚಿತ್ರದಲ್ಲಿನ ಗಡಸುತನ, ಅಥವಾ ಸಿಂಧೂರರ ಮೃದು ಚಿತ್ರಣ, ಇವೆರಡಕ್ಕಿಂತ ಭಿನ್ನವಾದ ಸಮತೋಲಿತ ಚಿತ,ಗಳಾಗಿದ್ದವು. ರಮ್ಯ ಹಾಗೂ ಸಮಕಾಲೀನ ಚಿತ್ರಗಳ ನಡುವೆ ಸೇತುವೆಯೊಂದರ ಆವಶ್ಯಕತೆ ಆಗ ಕರ್ನಾಟಕದಲ್ಲಿತ್ತು. ಆ ಕೆಲಸವನ್ನು ಶೆಣೈರ ಚಿತ್ರಗಳು ಮಾಡಿದವು.

ಮತ್ತೆ ತುಲನೆಗೆ ಸಿಗುವಂತಹ ಶೈಲಿಯೆಂದರೆ ಅವರ ಅಲ್ಯೂಮಿನಿಯಂ ಉಬ್ಬುಚಿತ್ರಗಳು. ಇಲ್ಲಿ ಪ್ರಾಯಶಃ ವಾಸುದೇವ್ ಅವರನ್ನು ನೆನೆಯಬಹುದು. ರಚನಾ ತಂತ್ರ ಸ್ವಲ್ಪ ವಿಭಿನ್ನವೇ. ವಾಸುದೇವರ ಕುಸುರಿ ಕೆಲಸ ಇಲ್ಲಿ ಕಾಣುತ್ತಿರಲ್ಲಿಲ್ಲ. ರೇಖಾ ಪ್ರಾಧಾನ್ಯವಾದರೂ ಸ್ವಲ್ಪ ಬೀಸು ನಡೆಗಳು ಹಾಗೂ ಆಕಾರಕ್ಕೆ , ಮೈವಳಿಕೆಗಳಿಗೆ ಹೆಚ್ಚು ಒತ್ತಡ ಇಲ್ಲಿ ಕಾಣುತ್ತಿತ್ತು. ವಸ್ತುಗಳು ಮೊದಲಿಗೆ ಅಮೂರ್ತವಾಗಿದ್ದರೂ ನಂತರದ ದಿನಗಳಲ್ಲಿ ಅವಕ್ಕೆ ಖಗೋಳ ಚಿಹ್ನೆಗಳನ್ನು ಅಳವಡಿಸಿ ಶೀರ್ಷಿಕೆಗಳನ್ನು ನೀಡುತ್ತಿದ್ದರು.

ತೈಲವರ್ಣದ ಸ್ಟಿಲ್ ಲೈಫ್‌ಗಳು ಶೈಲೀಕರಣದ ಪ್ರಾಥಮಿಕ ಹಂತವನ್ನು ದಾಟಿದ್ದವು. ಬಣ್ಣದಷ್ಟೇ ರೇಖೆಗೂ ಪ್ರಾಮುಖ್ಯತೆ ನೀಡುವ ಅಭ್ಯಾಸ ಇಲ್ಲಿಂದ ಆರಂಭವಾಯಿತು. ಈ ಹವ್ಯಾಸ ಅವರ ಇತ್ತೀಚಿನ ಚಿತ್ರಗಳವರೆಗೂ ಕಂಡು ಬರುತ್ತದೆ.

## ಶೈಲಿ ವೈವಿಧ್ಯಗಳು

ನಂತರ ಕೊಲ್ಯಾಜ್‌ಗಳತ್ತ ಗಮನ. ಈ ಹಂತದಲ್ಲಿ ಅವರು ಶೈಲೀಕರಣದಿಂದ ಅಬ್‌ಸ್ಟ್ರಾಕ್ಷನ್‌ನ ಕಡೆಗೆ ಒಲಿದರು. 70ರ ದಶಕದ ಆರಂಭದಲ್ಲಿ ಅವರು ನಡೆಸಿದ ಕೊಲ್ಯಾಜ್‌ಗಳ ಪ್ರದರ್ಶನದಲ್ಲಿ ಮುದ್ರಿತ ಚಿತ್ರಗಳನ್ನು ಅಂಟಿಸಿ ಚಿತ್ರ ರಚಿಸಿದ್ದರು. ಅಥವಾ ಮುದ್ದೆ ಮಾಡಿದ ಕಾಗದದ ಮೇಲೆ ಆಕೃತಿಗಳನ್ನು ರಚಿಸಿರುತ್ತಿದ್ದರು. ಅಮೂರ್ತ ಅಥವಾ - Non-- Objective- ಚಿತ್ರಣ ಇನ್ನೂ ತಲೆಹಾಕಿರಲಿಲ್ಲ. ಇದೇ ಹಂತದಲ್ಲಿ ಅಸೆಂಬ್ಲೇಜ್ ಮಾದರಿಯ ಚಿತ್ರಗಳನ್ನೂ ರಚಿಸಿದ್ದರು. ಮರದ ಕೊರಡುಗಳನ್ನು ಪೇರಿಸಿ ಅದರ ಮೇಲೆ ಕೆತ್ತನೆ ಮಾಡಿ ಕ್ಯಾನ್ವಾಸಿಗೆ ತೂಗು ಹಾಕಿರುತ್ತಿದ್ದರು.

ಈ ಮಧ್ಯೆ ವರ್ಣ ತಯಾರಕರೊಬ್ಬರು ಬಣ್ಣದ ಶಾಯಿಗಳನ್ನು ತಯಾರಿಸಿದಾಗ ಕೆಲಕಾಲ ಅದರಲ್ಲಿ ಪ್ರಯೋಗ ನಡೆಸಿದರು. ನಯವಾದ ಹಾಳೆಯ ಮೇಲೆ ರಚಿಸುತ್ತಾ, ಅಲ್ಲಲ್ಲಿ ಬಣ್ಣವನ್ನು ಕೆರೆದು ತೆಗೆದು, ಚಾಕುವನ್ನೆಳೆದು ಟೆಕ್ಸ್ಚರ್ ರಚಿಸುತಿದ್ದರು. ಅದನ್ನೇ ಹೋಲುವ , ಆದರೆ ಪಿಂಗಾಣಿ ಹಾಳೆಗಳ ಮೇಲೆ ಆಕ್ರಲಿಕ್ ಬಣ್ಣಗಳಿಂದ ರಚಿಸಿದ ಚಿತ್ರಗಳು ನಂತರ ರಚಿಸಲ್ಪಟ್ಟವು. ಇವುಗಳೆಲ್ಲವೂ ಹೆಚ್ಚಾಗಿ ನಿಸರ್ಗ ದೃಶ್ಯದ ಛಾಯೆ ಹೊಂದಿರುತ್ತಿದ್ದವು.

70ರ ದಶಕದ ಕೊನೆಯ ಭಾಗದಲ್ಲಿ ಶೆಣೈ ಬ್ರಷ್ ಬಿಟ್ಟು ಅಲ್ಯೂಮಿನಿಯಂ ಹಾಳೆ, ಚಾಣ, ಸುತ್ತಿಗೆ ಹಿಡಿದರು! ಏನು ಶಿಲ್ಪ ರಚನೆ ಆರಂಭಿಸಿದರೇ ಎಂದು ಆಶ್ಚರ್ಯ ಪಡಬೇಡಿ. ಇಲ್ಲ. ಉಬ್ಬು ಚಿತ್ರಗಳ ರಚನೆಗೆ ಆರಂಭಿಸಿದರು. ಮೊದಲ ಬಾರಿ ಇದನ್ನು ಕಂಡು ನಾನು ತಮಾಷೆ ಮಾಡಿದ್ದೆ - ಬಹುಷಃ ಕಲೆ ಬಿಟ್ಟು ಟ್ರಂಕ್ ರಿಪೇರಿ ಆರಂಭಿಸಿದ್ದಾರೆ ಎಂದು. ಮೊದಲಿಗೆ ಬಣ್ಣವಿಲ್ಲದ ಉಬ್ಬು ಚಿತ್ರಗಳನ್ನು ರಚಿಸಿದರು. ಎಷ್ಟೇ ಅಪ್ರಸಕ್ತವೆಂದರೂ ಇವನ್ನು ಚೋಳಮಂಡಲದ ಕಲಾವಿದರ ಆದರಲ್ಲೂ ವಾಸುದೇವ್, ಹರಿದಾಸನ್ ಮುಂತಾದವರ ಕೃತಿಗಳೊಡನೆ ಹೋಲಿಸಬೇಕಾಗುತಿತ್ತು. ನಂತರ ಆ ಶೈಲಿಯಲ್ಲಿ ಸ್ವಲ್ಪ ಮಾರ್ಪಾಟು ಮಾಡಿ ಉಬ್ಬು ಚಿತ್ರಕ್ಕೆ ಬಣ್ಣದ ಲೇಪನ ಕೊಡಲು ಆರಂಭಿಸಿದರು. ಅಲ್ಲಲ್ಲಿ ಬಣ್ಣದ ಮೇಲೆ ಟರ್ಪೆಂಟೈನ್ ಚೆಲ್ಲಿ ನಾಜೂಕು ಮೈವಳಿಕೆ ಮೂಡಿಸುತ್ತಿದ್ದರು. ಮುರಳಿ ಲಾಹೋಟಿ, ನರೇನ್ ಪಾಂಚಾಲ್ ಮೊದಲಾದವರ ಕೆಲವು ಉಬ್ಬು ಚಿತ್ರಗಳು ಇಲ್ಲಿ ಹೋಲಿಕೆಗೆ ಪರಿಗಣಿಸಬಹುದಾಗಿದೆ. ಶೆಣೈರಿಗೆ ಇಂತಹ ನಾಜೂಕು ಟೆಕ್ಸ್ಚರ್ ಬಗೆಗೆ ಇರುವ ಒಲವನ್ನು ಚೆನ್ನಾಗಿ ತೋರಿಸುವುದು ಅವರ ಜೀವನದ ಕೊನೆಯ ದಶಕದಲ್ಲಿ ರಚಿಸಿದ ಕಾಡು ಬಂಡೆಗಳ ಚಿತ್ರಗಳು.

ಡೆಕಾಲ್ಕೋಮ್ಯಾನಿಯಾ ಎಂಬ ತಮಾಷೆಯ ಹೆಸರಲ್ಲಿ ಕರೆಯಲ್ಪಡುವ ಡಾಡಾ ಮತ್ತು ಸರ್ರಿಯಲಿಸ್ಟರ ನಡುವೆ ಪ್ರಚಲಿತವಿದ್ದ ತಂತ್ರ ಶೆಣೈಗೆ ಬಲುಪ್ರಿಯ. ಈ ತಂತ್ರವೇನೆಂದರೆ ಬಣ್ಣ ಹಚ್ಚಿದ ಹಾಳೆಗಳನ್ನು ಒಂದಕ್ಕೊಂದು ತಗುಲಿಸಿ ತೆರೆಯುವುದು - ಒಂದು ರೀತಿಯ ಮಾನೋಪ್ರಿಂಟ್‌ನಂತೆ. ಹೀಗೆ ಮಾಡಿದಾಗ ಅದು ಮೋಹಕ ಟೆಕ್ಸ್ಚರ್‌ಗಳನ್ನು ಬಿಡುತ್ತದೆ. ಅವರ ಕಾಡು ಬಂಡೆಗಳ ಮಾಲಿಕೆಯಲ್ಲಿನ ಹೆಚ್ಚಿನ ಚಿತ್ರಗಳ ಮೈವಳಿಕೆಗಳನ್ನು ಪಾಲಿಥೀನ್ ಹಾಳೆಗಳನ್ನು ಒತ್ತುವ ಮೂಲಕ ರಚಿಸುತ್ತಿದ್ದರು. ಅದರ ಮೇಲೆ ಬಣ್ಣವಾಡಿಸಿ ಬಂಡೆಗಳ ನಿರ್ಮಾಣ ಮಾಡುತ್ತಿದ್ದರು.

ಶೆಣೈರ ವರ್ಣ ಪ್ರಜ್ಞೆ ವಿಶಿಷ್ಟವಾದುದು. ಪ್ರಖರ ವರ್ಣಗಳು ಅವರಿಗೆ ಪ್ರಿಯ. ಕೆಲವೊಮ್ಮೆ ಕಣ್ಣಿಗೆ ರಾಚುವಂತಿರಬೇಕು. ಅಲ್ಲೊಮ್ಮೆ ಇಲ್ಲೊಮ್ಮೆ ದಪ್ಪ ಇಂಪಾಸ್ಟೋಗಳು. ಅಥವಾ ಕೈಗೆ ಸಿಗುವಷ್ಟು ದಪ್ಪ ಮೆತ್ತಿದ ಬಣ್ಣಗಳು. ಮುಂಚಿನ ಅವರ ರೇಖಾ ಪ್ರಧಾನವಾದ ಕೊಲ್ಯಾಜ್‌ಗಳಲ್ಲಿ ರೇಖೆಗಳನ್ನು ಉತ್ಪ್ರೇಕ್ಷಿಸಲು ಫೆವಿಕೋಲ್‌ನೊಡನೆ ಬೆರಸಿದ ಮಿಶ್ರಣವನ್ನು ಚಕ್ಕುಲಿ ಹೊಯ್ದಂತೆ ಹೊಯ್ಯುತ್ತಾ ರಚಿಸಿರುತ್ತಿದ್ದರು. ಕಾಡು ಬಂಡೆಗಳ

ಮಾಲಿಕೆಯಲ್ಲಿ ತೆಳು ಬಣ್ಣಗಳ ಗ್ಲೇಜಿಂಗ್‌ನ ಯಥೇಚ್ಛ ಬಳಕೆ ಸಾಮಾನ್ಯವಾಗಿ ಕಂಡುಬರುತ್ತಿದ್ದ ಪ್ರಕ್ರಿಯೆ.

ಕಳೆದ ದಶಕದಲ್ಲಿ ಶೆಣೈ ರಚಿಸಿದ ಕಾಡು ಬಂಡೆ ಮಾಲಿಕೆಯಲ್ಲಿ ಅವರ ತಾಂತ್ರಿಕತೆಯ ಪರಾಕಾಷ್ಠೆಯನ್ನು ಗಮನಿಸಬಹುದು. ಇಲ್ಲಿನ ತಂತ್ರ ವಿಶೇಷ ಬಗೆಯದು. ಲಿನ್‌ಸೀಡ್ ಎಣ್ಣೆಯಿಂದ ತೆಳುಗೊಳಿಸಿದ ಬಣ್ಣಗಳನ್ನು ಅನಿರ್ಧಿಷ್ಟವಾಗಿ, ಮತ್ತು ಲಘುವಾಗಿ ಲೇಪಿಸುವುದು ಮೊದಲ ಹಂತ. ನಂತರ ಅದರ ಮೇಲೆ ಪಾಲಿಥೀನ್ ಹಾಳೆಯನ್ನು ಮುದ್ದೆ ಮಾಡಿ ಒತ್ತಡ ಹೇರಿಡುವುದು. ಇದರ ಓರೆ ಕೋರೆ ಟೆಕ್ಸ್ಚರ್‌ಗಳು ಅಷ್ಟರಲ್ಲಿ ಬಣ್ಣದ ಮೇಲೆ ತಮ್ಮ ಅಚ್ಚು ಮೂಡಿಸಿರುತ್ತವೆ. ಇದು ಬಂಡೆಗಳ ಕರಡು ರೂಪ. ಈಗ ಇದರ ಮೇಲೆ ಮುಖ್ಯ ಭಾಗಗಳನ್ನು ತೆಳು ಬಣ್ಣದ ಗ್ಲೇಜ್‌ಗಳಿಂದ ಮತ್ತು ಬೇಡವಾದ ಭಾಗಗಳನ್ನು ದಪ್ಪ ಅಪಾರದರ್ಶಕ ಬಣ್ಣಗಳಿಂದ ಮುಚ್ಚುತ್ತಾರೆ. ನಂತರ ಸ್ವಲ್ಪ ಜಾಗದಲ್ಲಿ ದಪ್ಪ ಇಂಪಾಸ್ಟೋಗಳು ಅಥವಾ ಬೇರೆ ವಿಧಾನದಿಂದ ರಚಿಸಿದ ಮೇಲ್ಮೈಯ ಸೃಷ್ಟಿ. ಕೊನೆಯಲ್ಲಿ ಬಂಡೆಯ ರೂಪ ತರಲು, ಅಥವಾ ಮೂರನೆಯ ಆಯಾಮದ ಭ್ರಮೆ ತರಿಸಲು ತೆಳು ಬಣ್ಣದ ಗೆರೆಗಳು.

ಫೆವಿಕಾಲ್‌ನ ಮಿಶ್ರಣದಿಂದ ಬಲತ್ತರ ರೇಖೆಗಳನ್ನು ರಚಿಸಿ, ಮಧ್ಯದಲ್ಲಿ ಅಕ್ಷರಗಳನ್ನು ಪಾತ್ರವಾಗಿ ಉಪಯೋಗಿಸಿ ರಚಿಸುವುದು ಅವರ ಇನ್ನೊಂದು ಶೈಲಿಯಾಗಿತ್ತು. ಶೆಣೈರ ಚಿತ್ರರಚನೆಯ ಅವಧಿಯುದ್ದಕ್ಕೂ ರೇಖಾಪ್ರಧಾನ ಎಂಬ ಮಾತನ್ನು ನಾನು ಹೇಳುತ್ತಲೇ ಬಂದಿದ್ದೇನೆ. ಹೀಗಾಗಿ ನನ್ನಂತೆ ನಿಮಗೂ ಅಚ್ಚರಿಯಾಗಬಹುದು. ಹಾಗಾದರೆ ಶೆಣೈರ ರೇಖಾಚಿತ್ರಗಳ ಬಗ್ಗೆ ಏಕೆ ಎಲ್ಲಿಯೂ ಮಾತಿಲ್ಲ, ಹಾಗೂ ಒಂದೂ ರೇಖಾಚಿತ್ರವೂ ಪುಸ್ತಕದಲ್ಲಿಲ್ಲ. ಒಮ್ಮೆ ಅವರು ಮೂರು ನಾಲ್ಕು ಕಲಾವಿದರೊಡನೆ ಬೆಂಗಳೂರಿನಲ್ಲಿ ಡ್ರಾಯಿಂಗ್‌ಗಳ ಪ್ರದರ್ಶನ ಮಾಡಿದ ನೆನಪು. ಆದರೆ ಅವರ ರೇಖಾಚಿತ್ರಗಳು ನನಗೆ ಸಿಗಲಿಲ್ಲ.

ಪಿಂಗಾಣಿ ಹಾಗೂ ವರ್ಣದ ತುಂತುರಿನೊಂದಿಗೆ ಸರಸವಾಡಲು ಹೊರಟಿದ್ದರು ಶೆಣೈ. ಈ ಮಾದರಿಯ ಅನೇಕ ಪೂರ್ಣವಾಗದ ಚಿತ್ರಗಳು ಅವರ ಸ್ಟುಡಿಯೋದಲ್ಲಿ ದೊರೆತವು. ಅವುಗಳ ಪ್ರದರ್ಶನ ಅವರು ಮುಂದೆ ಯೋಜಿಸಿದ್ದರೇನೋ.

ಅವರ ಎಲ್ಲಾ ಶೈಲಿ, ಮಾಧ್ಯಮಗಳಿಗೂ ನ್ಯಾಯಬದ್ಧ ಸ್ಥಾನ ಹಾಗೂ ವಿವರಣೆ ನೀಡಿದ್ದೇನೆ ಎಂದು ನಾನು ಹೇಳುತ್ತಿಲ್ಲ. ಆದರೂ ಇದರ ಆಧಾರದ ಮೇಲೆ ವೀಕ್ಷಕ ಅವರ ಚಿತ್ರಗಳನ್ನು ಆಸ್ವಾದಿಸಬಲ್ಲ ಎಂದು ಆಶಿಸುತ್ತೇನೆ.



ಗಣೇಶ

GANESHA



ಹೋಲಿ ನೃತ್ಯ

HOLI DANCE



ಸಂಯೋಜನೆ

COMPOSITION



ಪ್ರಕೃತಿ ಚಿತ್ರ

LANDSCAPE




ಟೆಂಪಲ್ ಪಾಂಡ್

TEMPLE POND



ಪ್ರಕೃತಿ ಚಿತ್ರ

LANDSCAPE



ಸಂಯೋಜನೆ

COMPOSITION



ಪ್ರಕೃತಿ ಚಿತ್ರ

LANDSCAPE



ಪ್ರಕೃತಿ ಚಿತ್ರ

LANDSCAPE



ವೈಲ್ಡ್ ರಾಕ್ಸ್

WILD ROCKS



ಇಮೇಜಸ್

IMAGES



ಪ್ರಕೃತಿ ಚಿತ್ರ

LANDSCAPE




One of the important projects of Karnataka Lalithakala Akademy includes publication of books on art and artists, quite a number of which are already in the market, and some in press. After books on many senior artists, now akademy intends to bring out books on contemporary artists also, of which this one about G.S.Shenoy is the first one. These books, I hope, will give sufficient information on the artist and his art, also on how the art has evolved in the state.

This book on Late Mr. Shenoy, though short, gives sufficient information on the artist and his art. This is partly due to the fact that the writer knows artist intimately. Shenoy's challenging works and goals to uplift the "CAVA" has fetched him appreciation from artists all around. But who knew that he orphans them at such an odd hour? Though Shenoy is not with us now, his contribution to the field of art is quite laudable.

I don't think it is out of place if I recollect those old days when Shenoy held his first solo, back in 1966. This was inaugurated by A.N.Krisna Rao (Anakru), the famed novelist of Karnataka, and among the audience were critic, G.Venkatachalam and well known academician Dr.T.M.A.Pai.

Most of the works exhibited there were landscapes, with a few still-lives and portraits. The excellent color harmony, individuality, realistic but new approach were evident. One could appreciate the expertise in both oil and water colors. The brush strokes and control over it were like poetic expressions. During later years Shenoy experimented on aluminium sheet reliefs, and gained recognition at home and abroad.

I hope artists, art-lovers, art students welcome these books. We welcome their criticism and appreciation.

Bangalore

P.R.Thippeswamy
President
Karnataka Lalithakala Academy




Mysore 1974.

A fine winter morning. There is a huge crowd right in the compound of medical college. What could be the matter. May be some VIP is dead and body brought for Post-mortem?

No. Are these medical students on strike?

No. No.

Then sure must be a movie in progress there.

No. No. No.

Definitely none of them.

Then?

An artist is demonstrating his technique. And people wasting (!tsu. .tsu) their time,-some folks, who peeped in and found it not interesting, commented. Still few started to trace the history of their forefathers who were supposed to be master painters, without caring that every body is turning a deaf ear to them. An elderly man criticized the young

doctors watching this funny show leaving aside their duties, and the artist's outrage for performing it here when a full-fledged art institute was just by the side of medical college.

Despite all these, the how-to-do painting demo started, that too in a strange manner hither to unknown to art students. A hand-made paper of imperial size is tacked to the board on the easel. And the artist is ready with a two inch flat sable brush.

Kerchief please, - artist requests. Pity. Has he any fear of performance? Never. See, he is soaking the kerchief in a bucket of water and wetting the paper with it. What on earth is this gentleman doing? ushers a student of art from the adjoining art institute, - before painting water colors the wet paper should be stretched, he concludes.

Watch now. The artist puts a broad band of greenish yellow paint on the sheet. My goodness! It is racing down like water in the Roarer of Jog. And several strokes more of different colors, he is almost finished. Now he is taking a knife from the box. Keep cool. It is a painting knife. But I heard that it is used for painting impastos in oil. What? He is scraping the paper with it. Err, gulp, wow! This not an abstract art. I can see, water, foliage, cloud and almost everything under the sky.

Now you close the book and have a confirming look at the wrapper. No, it is not a fiction nor is the title wrong.

By now artist stops. Steps back a couple of yards. Squints at his picture, takes a deep breath and...

Signs at the lower corner of the paper.

SHENOY.

Shenoy! This signature had made significant impact as a logo for progressive art of Karnataka.

My encounter with Shenoy was sometimes back in early seventies. I was a student of medicine at Mysore. I was the leader of literary activities of that college then. As you might have guessed, it is on my request that Shenoy performed the demo briefed in the beginning.

It was a period when artist of Mysore formed an association to familiarise art. The association was named Chitrakala Sangha, and Mr. P.R. Thippeswamy was the secretary then. Students like me were in a mood to go out of academicism but were unable to find anyone who can lead us out to the world of contemporary art.

It was then one fine day Thippeswamy called me telling that one Mr. Shenoy from Udupi is coming here and we will have his show. Though we have heard of Shenoy and seen works in Dassera exhibition we never had an opportunity to see a collection of his works nor to meet him in person, for that matter any artist. So we eagerly waited to meet that 'one Mr. Shenoy'




It was G. S. Shenoy, the foremost painter of our generation in Karnataka. Dwelling deeper into his art, style is beyond the scope of this book. Still I shall try to brush them up.

The techniques described in the opening chapter itself illustrates the revolutionary attitude of the artist. This does not mean that Shenoy started scribbling something all of a sudden and preached that it was an abstract or a non - objective art piece. He was one of the astonishing academic artist from the beginning of his career. Nor was he born in a family of artisans. He was born in a family of businessmen. Nevertheless he was successful in the science of art and commerce of painting! From creation to destination.

His life was an eventful one. It ranges from showing his canvasses on the pavement to an exhibition in that prestigious gallery in Singapore.

Gokuldas Shenoy was born in 1938. His father Sadananda Shanubhag was a businessman. There was a large field in front of his house which was always crowded with the performers of *Bannadavesha* (colored costume), *Panjurli, Kola* etc. Influenced by their colorful appearances, little Shenoy used to draw them. Though his parents, obviously, did not support him, he got appreciation from his maternal grandfather. the father of his mother Shantha bai. His grandfather used to carve idols of Ganesha as a hobby. He was said to have seen Ravivarma, one of the most influential painter of that time. He encouraged Shenoy. And thus Shenoy's love for painting blossomed.

Result - Shenoy lost his S.S.L.C exams. Anyway, it was a lucky incident in the history of Karnataka art as Karnataka could have lost an excellent artist whatever Shenoy would have become.

Well. But then his grandfather suggested to continue his education after S.S.L.C at Chamarajendra technical institute in Mysore. Shenoy was happy. But his family members protested. With persistence and stubborn attitude Shenoy was able to get the consent of his parents. Shenoy joined Chamarajendra technical institute in 1958. Studied there for a year.

His routine started with going to the school at seven in the morning, studying and practising there as per the curriculum. Leisure time was spent either in the bus stand sketching on the spot, or at the foot steps of Chamundi hills painting landscapes. Totally speaking, his routine was painting, painting was his routine. Soofi, a veteran wildlife painter of that time, who was a teacher there at the institute, saw this young boy's talent and zeal for painting. He felt that for Shenoy's calibre that institute was not good enough.

What next? Shenoy was puzzled. Soofi was ready with the solution. He advised Shenoy to join Sir J.J.School of Arts in Bombay for it would be a waste of time if he stayed there in Mysore instead.

Just imagine. Will the parents, who opposed his journey to Mysore, accept his proposition? Again the same scene repeated. Three months passed without arriving at any firm decision. Shenoy felt he was getting belated and decided to flee from the house. Meanwhile his grand father came to

his rescue again. By the time they gave a green signal it was August already.

Arriving at Bombay, he met Mr. Shiragoankar, the head of Fine arts Department at Sir J.J.School. Though Shiragoankar was stunned with Shenoy's works he expressed his helplessness as all the admissions were over. But he gave a good suggestion any way. He advised Shenoy to take first year exam from any other institute. And if Shenoy proved to be exceptional he would get him a seat. Almost certain of returning to Udupi, he went to the canteen for a cup of coffee. Quite unexpectedly he met K.S.Rao there. Rao, a winner of National award now, who also hailed from Shenoy's place, was there with Gopal Padmashali, another known personality now. Both of them heard Shenoy's story. The only person they could think of was....

Prof.G.S.Dandavathimatt.

Dandavathimatt was a painter from Dharwad, who was successfully running an art school in Bombay, called Nutan Kalamandir. Quite a few of our successful contemporaries were once student of Dandavathimatt. He was a great teacher.

Well. Thanks to those senior artists and their suggestions. Dandavathimatt gave all support and encouragement to Shenoy . He even used to hand over the key of the school to Shenoy giving full freedom to use it for the later's practice.

The outcome? That year there were only four first classes in the state. Out of which three were bagged by students of J.J. Only one by a student of some other school.

Yes, your guess is right. That anonymous student was none other than Shenoy himself.

This time Shiragoankar was waiting for Shenoy with open arms. He was admitted directly to the third year. Err... he finished his first year and you are saying he was admitted to third year... No. I am not wrong. Shiragoankar felt that a talented boy like Shenoy never needed the second year course!

Gopal Adivrekar, Vaman Chincholkar were his classmates there. Baburao Sathwalekar, S.B.Palsikar were his teachers. Of Karnataka painters Peter Lewis was senior, Sindhur was junior. Khande Rao was his classmate.

There was a regulation to the students. They had to visit all the exhibitions going on in Bombay and discuss them in the school. This sharpened there critical attitude. At Bombay he had chances to see many contemporary artists and their works face to face.

Shenoy passed the diplfoma in first class. Returned to Udupi. That was a time when living on art was a thing unheard of. He had to do some thing to earn his bread. So he thought to settle down in Bombay.

But his parents thought differently. If he was foreced to take on some responsibility, they thought, he could be relieved of his craze for art.So, they got him married to Sumathi in 1964. Shenoy was forced to live in Udupi. Gurudas and Rekha made their existence to this world eventually.

**Shrungar Art Gallery:**

If Shivarama Karantha can do and control all his multi faceted activities sitting in a remote corner why can't me, Shenoy thought, only if he could ever make artists in Bombay look at Udupi with interest. Any way, to earn his bread, he opened Shrungar studio which later accommodated his Shrungar art gallery. This was not an artist's studio, obviously. That was a time when visitors had to be paid to attend an exhibition, let alone buy an art work! So, Shenoy made use of photography for his livelihood. Shenoy exhibited his paintings, his followers' paintings there. He invited people like Sanatkar to exhibit their works there. Karnataka Lalitha Kala Akademy conducted its annual show there. It was the first time ever academy conducted its annual show outside Bangalore.

Shenoy's first major solo was at Jehangir art gallery in 1966. (The real first was the show in Udupi in a year before.) Shenoy felt that there was a need for a good which can gather and promote artists. His first attempt was a group called *Progressive painters of costal Mysore,* formed in 1969, which included most of the artists from coastal Karnataka, who have made their name now. A year later he formed *South Kanara Art Council.* Later he joined *Mysore Art Council* in the capital. It included Munoli, Ram Keote, Jasu Raval, Peter Lewis, Bhaskar Rao etc. He was the founder member of Karnataka Kala Mela.

He felt and stressed the negligence on the part of the government towards arts. To protest this and to make people aware of art, he conducted a group show on the pavements of bible society of India, Bangalore. The two pavement shows

during early 70's was a shocking news to the government.

**Shenoy at Bangalore.**

After many years of stay in his native place, he decided, for obvious reasons, to migrate to Bangalore. In the Summer of 1984 he came to Bangalore. Particularly for artists it is imperative to stay in the capital for many reasons. And for some times, he was also looking after a gallery on the walls of a furniture show room in the main part of the city. Though sounds strange, it was a modern furniture show room but it exhibited many big names of contemporary art on its wall! In the later years he was the advisor for the Renaissance gallery.

**Shenoy as the dean of CAVA**

Shenoy was asked to take charge of CAVA- Chamaraja Academy of Visual Arts, the modern disguise of Chamarajendra Technical Institute, where Shenoy's journey to the field of art started. Is there anything more pleasurable than becoming the head of an institute where one studied earlier?

In the month of August 1993, Shenoy took charge as the dean of that institute. Shenoy too was extremely happy about this. He dreamt of lifting it from the doldrums and raising its status to eaqual any leading art institutions of the nation. He sought for some land at foot steps of Chamundi hills. His idea was to make CAVA some thing like Shanthinikethan, where students are also exposed to other forms of arts side by side .

**The end of the story.**

when I was asked by the Karnataka Lalithakala Akademi to write this monograph, some times back in August this year, I thought I would end up writing here 'and thus he lived happily ever after'. But I had to change the text and am forced to write something which I thought would not have a place in the present edition of this book.

I had written about him several times previously. I had spoken to him about every aspect of his art. I knew most of the news about him and most of his views. Yet, I felt I had to talk to him before I begin the work. But whenever we planned to meet, one of us had some problem and couln't make it. Finally on 16th of October this year, he rang me up telling that he was on his way to Delhi and was absolutely and astonishingly free.

He talked about his work, his life, not, in the least, ignoring his failures. Shenoy was surprisingly a disciplined, as commonly artists are recognised by their bizzare behaviour. From his exhibition to the maintainance of his documents and photos everything was very much in order. I haven't seen a sunrise. But many artists I stayed with, have not even seen sun in the east at all! When I was at Shenoy's place, by the time I said goodby to the matress, it was not unusual to see him freshened up and active with a brush, which always admired. and of course, with a cigarate, which I always condemned. When I talked about this, he explained me how he has prepared everything for his daughter's marriage which was more than a couple of months ahead. Shenoy was known for his jovial nature, and witty conversations.

When at Delhi he suffered a mild heart attack. He was brought to Bangalore. I contacted him after sometime in November. He asked me to meet him on wednesday 16th. But I could not.

**17th November 1994.**

It was early hours of morning. Still dark out side. My phone rang. I thought it must be some patient and was sure that he would ask whether he can take that cough syrup then!

But the tone on the other side was sad.

And I could hear

"Mr. Shenoy is...."

I hate to recapitualte, but it meant,

**G.S.SHENOY**

**IS A**

**HISTORY**

**NOW**




Shenoy used to treat every medium with due respect. He understood the pros and cons of all media he used and took advantage of this. If he changed his medium often, it never meant that he was unable to continue that medium nor was that he bid farewel to that medium. It is not unusual to find Shenoy to revert back to an old medium again sometimes latter in his life. This also applies to his styles. This was very evident in his last exhibition. Here he had exhibited most of his media and styles- all based on imagery of Ganesha.

If we want to discuss his art we should start from his academic paintings. He was a very good painter in the academic style to start with. Like any regular artist after the school he also did landscapes, still lives and portraitss.

But he had more love for nature. Majority of his landscapes of that time were water colors. And he was very fond of the wet in wet technique. He never made a replica of nature nor imitated nature. They were something like a caricature, capturing the essence of the environment. His landscapes were capable of expressing their emotions. Anyway they were drastically different from the works of classic wet-in-wet masters like M.S.Joshi. They were rather stylized. Of his contemporaries here, only Punchithaya had a style similar to it, though with significantly different color sensibility.

This technique is a challenge to the artist. This needs sufficient practice and patience. At times, he used colors that were never natural, but very unique. Say, a green sky!

Confidenht brush strokes were part of the technique. Use of palette knife to scrape the wet paint, to put a straight line, to make local texture had remained as a significant technic throughout his works.

Portraits had a different approach. More candid. His portrait of his sister "proud of her new frock" was a thing which only a candid photographer could have captured. Another portrait which is included in this monograph was painted in the late sixties. The transcendental euphoria imparted in this portrait places this above the mundane academic art. This particular portrait compels me to compare it with another contemporary painter Sindhur's portrait of "Mrs. Abraham". Though this portrait has the same qualities of Shenoy's said work one can easily feel the difference in color consciousness, handling of colors by both artists. I can arbitrarily take Peter's portraits also for discussion. Sindhur's colors are sober, soft, rather gentle. On the contrary Peter's colors are rather brisk, harsh, but technically superb. Shenoy's own colors stood in the middle.

As a matter of fact, Shenoy's paintings then bridged the gap between the mundane academicism and the confusing modernism his generation faced. That was a welcome change that Karnataka was longing to have.

His still-lives were the first generation of stylization to appear among the artists of Karnataka. This was the point where Shenoy's lines started to gain some significance. And this delicate love for lines which were lost in the gallery of colors and forms was retained in all most all his future styles.

Shenoy did collages in the middle. They were his first step towards abstraction, though were not non-objective. He used either printed pictures or drew on crumpled paper collage. He did some assemblages also. He nailed some found objects to canvass and inscribed or carved on it.

Shenoy did not even leave the color inks untouched. He experimented on glossy art paper with colored ink. Probably some extension of this evolved in to his major style of acrylic on ceramic tiles, of which he held a solo in the late seventies.

Shenoy had treated lines with authenticity and respect. But astonishingly we know nothing about his drawings. He never exhibited nor preserved his drawings. Shenoy did not show any interest in sculpture, or graphics.

But in the early eighties he came out with metal reliefs. Basically aluminium sheets hammered from the front. To start with they were supposed to be non-objective. As he wrote me sometimes then, he said to have arrived at true abstraction. But after a few months, when the solo of these reliefs were held, I saw them having many horologic symbols and name. I made some arguments about this in an encounter with him sometimes after the exhibition. I remarked that it was a falsification of so called Indianity in art. But he confessed he did not believe in really non-objective paintings. That was true to him. Because even in the wild rocks series one can presume some identifiable structures.

In the beginning he left them unpainted. These pictures need, though not emphatically, to be compared with Vasu's reliefs. But Shenoy's forms or lines never had decisive flux

which Vasu's relief had. But before long Shenoy started painting on them. Making textures with linseed oil, turpentine etc. took his reliefs in an entirely different direction. Works of Lahoti, Naren Panchal can be added for comparison of these reliefs with.

Probably last and best of Shenoy's techniques is seen in the series called "Wild Rocks". Crumpled polythene sheet is held pressed on a pool of paint, -usually thinned, with linseed oil, applied loosely and randomly on canvas . This imparts the innate texture of the sheet to the wet paint and forms the basis of the theme. The texture gives the appearance of the texture found on the cross section of granite. This is further refined through additional colors and glazes. Extraneous area and background areas are painted with opaque paint. A few additional white or light impastos with deliberate textures and glazes are added then. The spacial organization is highlighted with a few strokes of brush and it is ready to be framed.

For Some time he also worked with fevicol - Synthetic adhesive, and ceramics to create thick line. And sprayed them for attractive light and shadow effect.

Though I don't claim that I have covered his style and techniques exhaustively, I hope this gives sufficient insight to the readers to understand Shenoy's art in depth.